CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೧೮, ೨೦೦೪ (ಕಾರ್ತಿಕ ೨೭, ಶಕ ವರ್ಷ ೧೯೨೬) | ಸಂಚಿಕೆ ೪೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆಯ ನ್ಯಾಯಾಲಯಗಳನ್ನು ಖಾಯಂಗೊಳಿಸುವ ಬಗ್ಗೆ

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲಾ 83 ಎಲ್‌ಸಿಇ 87, ದಿನಾಂಕ: 27.3.1989.
2) ಸರ್ಕಾರದ ಆದೇಶ ಸಂಖ್ಯೆ: ಲಾ 166 ಎಲ್‌ಸಿಇ 88, ದಿನಾಂಕ: 10.12.1991.
3) ಸರ್ಕಾರದ ಆದೇಶ ಸಂಖ್ಯೆ: ಲಾ 9 ಎಲ್‌ಸಿಇ 86, ದಿನಾಂಕ: 18.3.1986.
4) ಸರ್ಕಾರದ ಆದೇಶ ಸಂಖ್ಯೆ: ಲಾ 195 ಎಲ್‌ಸಿಇ 91, ದಿನಾಂಕ: 3.7.1992.
5) ಸರ್ಕಾರದ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ದಿನಾಂಕ: 7.8.2004.
6) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-67 (53-56) 2004, ದಿನಾಂಕ: 28.2.2004.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳಿಗೆ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳನ್ನು ಕ್ರಮವಾಗಿ ಮೇಲೆ ಓದಲಾದ (1) ರಿಂದ (4) ರವರೆಗಿನ ಸರ್ಕಾರಿ ಆದೇಶಗಳಲ್ಲಿ ಸೃಜಿಸಲಾಗಿತ್ತು. ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಮೇಲೆ ಓದಲಾದ (5) ರಲ್ಲಿನ ದಿನಾಂಕ: 7.8.2004ರ ಸರ್ಕಾರಿ ಆದೇಶದ ದಿನಾಂಕ: 1.4.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಹೊನ್ನಾಳಿ
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ), ದಾವಣಗೆರೆ
3) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಚೆನ್ನಗಿರಿ
4) ಜೆಎಂಎಫ್‌ಸಿ (ಎರಡನೇ ನ್ಯಾಯಾಲಯ) ದಾವಣಗೆರೆ

ಮೇಲ್ಕಂಡ ನ್ಯಾಯಾಲಯಗಳನ್ನು ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಖಾಯಂಗೊಳಿಸುವಂತೆ ಮೇಲೆ ಓದಲಾದ (6)ರ ದಿನಾಂಕ: 28.2.2004 ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರು ಶಿಫಾರಸ್ಸು ಮಾಡಿದ್ದು, ಸದರಿ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 27 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2004**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯದ ಇವರ ಶಿಫಾರಸ್ಸಿನಂತೆ ಈ ಕೆಳಕಂಡ ನ್ಯಾಯಾಲಯಗಳನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ (ಅನುಬಂಧ-'ಅ' ದಲ್ಲಿ ತೋರಿಸಿರುವಂತೆ) ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂ ಆಗಿ ಪರಿವರ್ತಿಸಲಾಗಿದೆ:-

1) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಹೊನ್ನಾಳಿ
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ), ದಾವಣಗೆರೆ

3) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಚೆನ್ನಗಿರಿ

4) ಜೆಎಂಎಫ್‌ಸಿ (ಎರಡನೇ ನ್ಯಾಯಾಲಯ) ದಾವಣಗೆರೆ

ಕ್ರಮ ಸಂಖ್ಯೆ: 1 ರಿಂದ 3 ರ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01" ಅಡಿಯಲ್ಲಿ ಮತ್ತು ಕ್ರಮಸಂಖ್ಯೆ: 4 ರ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-108-0-01" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 639 ವೆಚ್ಚ-7:04, ದಿನಾಂಕ: 1.9.2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಲಾ 27 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2004**

| ಕ್ರಮ ಸಂಖ್ಯೆ | ಪದನಾಮ | ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ ಹೊನ್ನಾಳಿ | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ದಾವಣಗೆರೆ | ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ ಚೆನ್ನಗಿರಿ | ಜೆಎಂಎಫ್‌ಸಿ 2ನೇ ನ್ಯಾಯಾಲಯ ದಾವಣಗೆರೆ |
|---|---|---|---|---|---|
| | **ಗೆಜೆಟೆಡ್** | **ಹುದ್ದೆಗಳ ಸಂಖ್ಯೆ** | | | |
| 1 | ಸಿವಿಲ್ ನ್ಯಾಯಾಧೀಶರು (ಕಿ.ವಿ) | 1 | 1 | 1 | 1 |
| | **ನಾನ್-ಗೆಜೆಟೆಡ್** | | | | |
| 1 | ಶಿರಸ್ತೇದಾರ್ | 2 | - | 2 | 1 |
| 2 | ಶೀಘ್ರಲಿಪಿಗಾರ | 1 | 1 | 1 | 1 |
| 3 | ಪ್ರಥಮದರ್ಜೆ ಸಹಾಯಕ | 3 | 1 | 3 | 7 |
| 4 | ದ್ವಿತೀಯದರ್ಜೆ ಸಹಾಯಕ | 5 | - | 5 | - |
| 5 | ಬೆರಳಚ್ಚುಗಾರ | 2 | 1 | 2 | 1 |
| 6 | ಬೆರಳಚ್ಚು-ನಕಲುಗಾರ | 1 | - | 1 | 1 |
| 7 | ಬೇಲಿಫ್ಸ್ | 2 | - | 2 | - |
| 8 | ಪ್ರೋಸಸ್ ಸರ್ವರ್ಸ್ | 5 | - | 5 | - |
| 9 | ಅಟೆಂಡರ್ | 2 | 1 | 2 | 2 |
| 10 | ಪ್ಯೂನ್ | 3 | 2 | 3 | 4 |
| | ಒಟ್ಟು | 27 | 07 | 27 | 18 |

**ಚಿಕ್ಕಹನುಮಂತಯ್ಯ**

ಪಿ.ಆರ್. 1177 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## PERSONNEL AND ADMINISTRATIVE REFORMS SECRETARIAT

**Sub :** Sanction of Medical expenses, telephone charges and Servant Allowance to the retired Chief Justices and Judges of the High Court of Karnataka-Reg.

**Ref :** Letter No. RPS. 71/2002 dated 21.2.2004 from the Registrar General of High Court of Karnataka.

**Preamble:**

The issue of providing medical facilities to the retired Chief Justices/Judges of the High Courts was one of the subject matter discussed in the Chief Justices Conference held at New Delhi during October 2003. It was resolved in the Conference that the Chief Justices should take up the matter with the respective State Governments for providing facilities to the retired Chief Justices and Judges atleast on the same pattern as sanctioned by the Allahabad High Court. Accordingly the Registrar General, High Court of Karnataka vide his letter dated 21.2.2004 referred to above has informed that the former Chief Justices and Judges of the High Court of Karnataka having held such constitutional posts are finding it difficult and embarrassing to attend to the personal matters and secure medical treatment for themselves or their spouses and requested the State Government to consider and issue necessary orders providing medical facilities to the retired Chief Justices/ Judges of High Court of Karnataka, Further it is also requested for payment of Rs. 1,500/- per month for engaging the services of an attendant at the residences of the retired Chief Justices/Judges. It is also requested that an amount of Rs. 1500/- per month be reimbursed as telephone charges to the telephones installed at the residences of the retired Chief Justices/Judges of the High Court. The State Government have examined the issue and following orders are issued.

**Government Order No. DPAR 84 SHC 2004, Bangalore dated: 15th October 2004**

Government are pleased to order the following facilities to the retired Chief Justices and Judges of the High Court of Karnataka.

| Reimbursement of | High Court Judges (retired) | Chief Justices (Retired) |
|---|---|---|
| Servant Allowance | Rs. 2500/- P.M. | Rs. 3000/- P.M. |
| Telephone Charges | Rs. 1000/- P.M. | Rs. 1500/- P.M. |
| Medical expenses | Rs. 10,000/- P.A. | Rs. 15,000/- P.A. |

Provided that:

(a) The Chief Justices and Judges have retired from the Karnataka High Court and staying any where in the country;
(b) The Chief Justices and Judges are not practicing as Senior Advocates;
(c) They are not engaged or re-employed in any Government Assignments/ Arbitrators.
(d) The reimbursement of Medical expenses shall be covered by the Karnataka Ministers, Minister of State and Deputy Ministers Medical Attendance Rules, 1958 as applicable to the sitting Chief Justice/Judges of the High Court of Karnataka.

The Registrar General, High Court of Karnataka shall be the drawing and disbursing Officer in respect of the above items preferred by the retired Chief Justices and Judges of the High Court of Karnataka.

The expenditure in this regard is debitable to the head of account 2014-00-102-0-01 High Court Judges.

This Order issues with the concurrence of Finance Department vide its U.O. No. FD 1270 S-1/04 dated: 11.10.2004.

By Order and in the name of the Governor of Karnataka,

PR-1187 **H. R. NAGENDRA**

Under Secretary to Government, DPAR (Services-3).

**CORRIGENDUM**

**No. DPAR 580 SAS 2004 Bangalore, dated: 14th October 2004**

In the Government Order No. DPAR 684 SAS 2002 dated: 18.02.2003 the existing Head of Account "2070-00-003-4-01 (Nonplan)" occurring in para 4 shall be substituted by the Head of Account "2052-00-090-050- Office Expenses".

By Order and in the name of the Governor of Karnataka,

PR-1188 **B. V. KUMARASWAMY**

Under Secretary to Government, DPAR (Services-1).

**ಲೋಕೋಪಯೋಗಿ ಸಚಿವಾಲಯ**

**ವಿಷಯ :** ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿಗೆ ಸೇರಿದ ಒಟ್ಟು 3 ಹಳ್ಳಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಂಖ್ಯೆ: ಮುಇಂ: ಸಂಕದ: ರಸ್ತೆಶಾಖೆ: 7: 2004-05 ಹೊ. ನರಸೀಪುರ ಹಳ್ಳಿ ರಸ್ತೆ ಜಿಮುರ, ದಿನಾಂಕ: 8.9.2004.

2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಸ್ತೆಶಾಖೆ:ಸಇಂ8: 2004-05, ದಿನಾಂಕ: 08.09.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿಗೆ ಸೇರಿದ ಈ ಕೆಳಕಂಡ 3 ಹಳ್ಳಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಹಾಸನ ಜಿಲ್ಲೆ**

ಅ) ಹೊಳೆನರಸೀಪುರ ತಾಲ್ಲೂಕು ಬಿ. ಟಿ. ರಸ್ತೆಯಿಂದ ಕಿನ್ನರಹಳ್ಳಿ ಮಾಚಗೌಡನಹಳ್ಳಿ ಮೂಡಲ ಕೊಪ್ಪಲು ಹರದನಹಳ್ಳಿ ಮೂಲಕ ಬಿ.ಟಿ. ರಸ್ತೆಯಿಂದ ಕೋಡಿಹಳ್ಳಿ ರಸ್ತೆಗೆ ಸೇರುವ ರಸ್ತೆ ಉದ್ದ-5.60 ಕಿಮೀ.

ಆ) ಹೊಳೆನರಸೀಪುರ ತಾಲ್ಲೂಕು ಗೊರೂರು ಚಿನಕುರಳಿ ರಸ್ತೆಯಿಂದ ಆಲೇನಹಳ್ಳಿ ಕಬ್ಬಿನಹಳ್ಳಿ ರಸ್ತೆ ಉದ್ದ 3.80 ಕಿಮೀ.

**ಬೆಂಗಳೂರು ಗ್ರಾಮಾಂತರ ಜಿಲ್ಲೆ**

ಇ) ದೊಡ್ಡಬಳ್ಳಾಪುರ ತಾಲ್ಲೂಕು ಕೆ. ಎಸ್. ರಸ್ತೆಯಿಂದ ಚಿಕ್ಕಮಂಕನಾಳಕ್ಕೆ ಕೊಲಿಗೆರೆ ಕಾಮನ ಅಗ್ರಹಾರ ಮಾರ್ಗವಾಗಿ ಸೇರುವ ರಸ್ತೆ ಉದ್ದ 7.00 ಕಿಮೀ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 89 ಸಿಆರ್‌ಎಂ 2004, ಬೆಂಗಳೂರು ದಿನಾಂಕ: 16ನೇ ಅಕ್ಟೋಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಹಳ್ಳಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

**ಹಾಸನ ಜಿಲ್ಲೆ**

ಅ) ಹೊಳೆನರಸೀಪುರ ತಾಲ್ಲೂಕು ಬಿ. ಟಿ. ರಸ್ತೆಯಿಂದ ಕಿನ್ನರಹಳ್ಳಿ ಮಾಚಗೌಡನಹಳ್ಳಿ ಮೂಡಲ ಕೊಪ್ಪಲು ಹರದನಹಳ್ಳಿ ಮೂಲಕ ಬಿ.ಟಿ. ರಸ್ತೆಯಿಂದ ಕೋಡಿಹಳ್ಳಿ ರಸ್ತೆಗೆ ಸೇರುವ ರಸ್ತೆ ಉದ್ದ-5.60 ಕಿಮೀ.

ಆ) ಹೊಳೆನರಸೀಪುರ ತಾಲ್ಲೂಕು ಗೊರೂರು ಚಿನಕುರಳಿ ರಸ್ತೆಯಿಂದ ಆಲೇನಹಳ್ಳಿ ಕಬ್ಬಿನಹಳ್ಳಿ ರಸ್ತೆ ಉದ್ದ 3.80 ಕಿಮೀ.

**ಬೆಂಗಳೂರು ಗ್ರಾಮಾಂತರ ಜಿಲ್ಲೆ**

ಇ) ದೊಡ್ಡಬಳ್ಳಾಪುರ ತಾಲ್ಲೂಕು ಕೆ. ಎಸ್. ರಸ್ತೆಯಿಂದ ಚಿಕ್ಕಮಂಕನಾಳಕ್ಕೆ ಕೊಲಿಗೆರೆ ಕಾಮನ ಅಗ್ರಹಾರ ಮಾರ್ಗವಾಗಿ ಸೇರುವ ರಸ್ತೆ ಉದ್ದ 7.00 ಕಿಮೀ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1191

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯ ದಿನಾಂಕ: 12.4.01 ರಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಈಕಾಅ 2003, ದಿನಾಂಕ: 23.9.03
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಈಕಾಅ 2003, ದಿನಾಂಕ: 16.12.03

**ಪ್ರಸ್ತಾವನೆ:**

2000-01ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದಂತೆ ದಿನಾಂಕ: 1.4.2000 ದಂದು ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಇದ್ದ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ: 1 ಮತ್ತು 2 ರಂತೆ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಹುದ್ದೆಗಳ ಬಗ್ಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ ಇವರನ್ನು ಕೋರಲಾಗಿತ್ತು. ಅದರಂತೆ, ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ತಮ್ಮ ಪತ್ರದೊಂದಿಗೆ ಆ ಇಲಾಖೆಯ ಕೇಂದ್ರ ಕಚೇರಿ ಹಾಗೂ ಸಂಬಂಧಪಟ್ಟ ಅಧೀನ ಕಚೇರಿಗಳಲ್ಲಿ ಸುಮಾರು 5-6 ವರ್ಷಗಳಿಂದ ಖಾಲಿ ಇರುವ ರದ್ದುಪಡಿಸಬಹುದಾದಂತಹ ಹುದ್ದೆಗಳ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆ ಪ್ರಕಾರ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯಲ್ಲಿ ಐದಾರು ವರ್ಷಗಳಿಂದ ಒಟ್ಟು 206 ಹುದ್ದೆಗಳು ಖಾಲಿ ಇದ್ದು, ಸದರಿ ಹುದ್ದೆಗಳ ಪೈಕಿ ಶೇಕಡ 80 ರಷ್ಟು ಹುದ್ದೆಗಳನ್ನು ಕಡಿತಗೊಳಿಸಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 178 ಜಿಪಅ 04, ದಿನಾಂಕ: 21ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯಲ್ಲಿ ದಿನಾಂಕ: 1.4.2000 ರಂದು ಖಾಲಿ ಇದ್ದ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1 ರಲ್ಲಿನಂತೆ ಒಟ್ಟು 206 ಹುದ್ದೆಗಳ ಪೈಕಿ ಆಯಾ ಹುದ್ದೆಗಳ ಎದುರಿಗೆ ನಮೂದಿಸಿರುವಂತೆ ಶೇಕಡ 80 ರಷ್ಟು ಹುದ್ದೆಗಳನ್ನು ಒಟ್ಟು 164 ಹುದ್ದೆಗಳನ್ನು ಸರ್ಕಾರವು ರದ್ದುಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ-1**

| ಕ್ರ. ಸಂ. | ಹುದ್ದೆ | ಕೇಂದ್ರ ಕಚೇರಿ, ಬೆಂಗಳೂರು | ವೃತ್ತ ಕಚೇರಿ | | | | | | | | ಷರಾ |
|---|---|---|---|---|---|---|---|---|---|---|---|
| | | | ಬೆಂಗಳೂರು | ಮೈಸೂರು | ಬೆಳಗಾಂ | ಗುಲ್ಬರ್ಗಾ | ಮಂಗಳೂರು | ದಾವಣಗೆರೆ | ಬಳ್ಳಾರಿ | ಧಾರವಾಡ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಗ್ರೂಪ್-ಎ ಮತ್ತು ಬಿ | - | - | - | - | - | - | - | - | - | - |
| 1 | ಗ್ರೂಪ್-ಸಿ ಆಕೃತಿ ರಚನಾಕಾರರು | 3 | 8 | 6 | 8 | - | 18 | 7 | - | 2 | - |
| 2 | ಆಪರೇಟರ್:ವೆಲ್ ಬೋರಿಂಗ್ ಆಪರೇಟರ್ | - | 10 | - | 3 | 1 | 5 | 6 | 14 | 9 | - |
| 3 | ಪಂಪ್ ಆಪರೇಟರ್: ಫಸ್ಟ್‌ಗ್ರೇಡ್ ವೈಯರ್ ಮೆನ್ | - | 1 | - | - | - | - | 1 | - | - | - |
| 4 | ವೈರ್‌ಮೆನ್ ಕಮ್ ಮೈಕಾನಿಕ್ | - | - | 1 | - | - | - | - | - | - | - |
| 5 | ಪಂಪ್ ಮ್ಯಾಕಾನಿಕ್ | - | 4 | 6 | - | 2 | - | 5 | 2 | - | - |
| 6 | ಡ್ರಿಲ್‌ಟ್ರಕ್ ಡೈವರ್ | - | 2 | - | - | - | - | - | - | - | - |

| ಕ್ರ. ಸಂ. | ಹುದ್ದೆ | ಕೇಂದ್ರ ಕಚೇರಿ, ಬೆಂಗಳೂರು | ವೃತ್ತ ಕಚೇರಿ | | | | | | | | ಷರಾ |
|---|---|---|---|---|---|---|---|---|---|---|---|
| | | | ಬೆಂಗಳೂರು | ಮೈಸೂರು | ಬೆಳಗಾಂ | ಗುಲ್ಬರ್ಗಾ | ಮಂಗಳೂರು | ದಾವಣಗೆರೆ | ಬಳ್ಳಾರಿ | ಧಾರವಾಡ | |
| 7 | ಸೀನಿಯರ್ ವರ್ಕ್ ಇನ್ಸ್‌ಪೆಕ್ಟರ್ | - | - | - | - | - | - | - | 6 | - | - |
| 8 | ಜೂನಿಯರ್ ವರ್ಕ್ ಇನ್ಸ್‌ಪೆಕ್ಟರ್ | - | - | 3 | - | - | 5 | 5 | - | - | - |
| 9 | ಅಸಿಸ್ಟೆಂಟ್ ಡ್ರಿಲರ್ | - | - | - | - | - | - | 3 | - | - | - |
| 10 | ಫೋರ್‌ಮೆನ್ ಕಮ್ ಮೆಕಾನಿಕ್ | - | - | - | - | 3 | - | - | - | - | - |
| 11 | ಎಸ್.ಆರ್.ಆರ್. ಚಾಲಕ | - | - | - | 1 | - | - | - | - | - | - |
| 12 | ಕೆಲಸ ನಿರೀಕ್ಷಕ | - | - | - | - | - | - | - | - | 10 | - |
| 13 | ನೀರು ಸರಬರಾಜು ನಿರ್ವಾಹಕ | - | - | - | - | - | - | - | - | 1 | - |
| 14 | ಬ್ಲೂಪ್ರಿಂಟರ್ | - | - | - | - | - | 1 | - | - | - | - |
| 15 | ಟ್ರೇಸರ್ | - | - | - | - | - | 2 | - | - | - | - |
| 16 | ಆಟೋಮೆಕಾನಿಕ್ | - | - | - | - | - | - | - | 1 | - | - |
| 17 | ಮೇಸ್ತ್ರಿ | - | - | 1 | - | - | - | - | - | - | - |
| | **ಒಟ್ಟು** | **3** | **25** | **17** | **12** | **6** | **21** | **27** | **23** | **23** | |
| 18 | ಗ್ರೂಪ್-ಡಿ ಟಿಬಿಮೇಟಿ | - | 1 | - | - | - | - | 4 | - | - | |
| 19 | ಮಿಸಲೇನಿಯಸ್ ಕೂಲಿ | - | - | 3 | - | - | - | - | - | - | - |
| 20 | ಮೆಸನ್‌ಕಮ್ ಹೆಲ್ಪರ್ | - | - | 2 | - | - | - | - | - | - | - |
| 21 | ಕುಕ್ | - | - | - | - | - | - | 2 | - | - | - |
| 22 | ವಾಟರ್ ಬಾಯ್ | - | - | - | - | - | - | 4 | - | - | - |
| 23 | ತೋಟಿ | - | - | - | - | - | - | 2 | - | - | - |
| 24 | ಕಾರ್‌ಪೆಂಟರ್ | - | - | - | 4 | - | - | - | - | - | - |
| 25 | ಗೌಂಡ್ | - | - | - | 1 | - | - | - | - | - | - |
| 26 | ಬ್ಲಾಕ್‌ಸ್ಮಿತ್ | - | - | - | 2 | - | - | - | - | - | - |
| 27 | ಪೈಂಟರ್ | - | - | - | 8 | - | - | - | - | - | - |
| 28 | ಗಾರ್ಡನರ್ | - | - | - | 1 | - | - | - | - | - | - |
| 29 | ಮೆಸ್‌ಮೆನ್ | - | - | - | 2 | - | - | - | - | - | - |
| 30 | ಫೈರ್‌ಮೆನ್ | - | - | - | 2 | - | - | - | - | - | - |
| 31 | ಸಹಾಯಕ ಕಾರ್ ಪೆಂಟರ್ | - | - | - | 1 | - | - | - | - | - | - |
| | **ಒಟ್ಟು** | **-** | **1** | **5** | **21** | **-** | **-** | **12** | **-** | **-** | **-** |

**ಘೋಷ್ವಾರು**

| | | | | | | | | | | | |
|---|---|---|---|---|---|---|---|---|---|---|---|
| | ಗ್ರೂಪ್ ಎ ಮತ್ತು ಬಿ | - | - | - | - | - | - | - | - | - | - |
| | ಗ್ರೂಪ್ ಸಿ | 3 | 25 | 17 | 12 | 6 | 31 | 27 | 23 | 23 | 167 |
| | ಗ್ರೂಪ್ ಡಿ | - | 1 | 5 | 21 | - | - | 12 | - | - | 39 |
| | **ಒಟ್ಟು** | **3** | **26** | **22** | **33** | **6** | **31** | **39** | **23** | **23** | **206** |

**ಎ. ಹೊನ್ನಪ್ಪ ನಾಯಕ್**

ಪಿ.ಆರ್.1064

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸಂಖ್ಯೆ: ಸಿಆಸುಇ 57 ಮಾಹಅ 2004, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2004**

**ಸುತ್ತೋಲೆ**

**ವಿಷಯ:** ಮಾಹಿತಿ ಹಕ್ಕು ಕಾಯ್ದೆಯಡಿಯಲ್ಲಿ ಗುರುತಿಸಲಾದ ಸಕ್ಷಮ/ಅಪೀಲು ಪ್ರಾಧಿಕಾರಗಳು ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳನ್ನು ಸೂಚನಾ ಫಲಕದಲ್ಲಿ ಪ್ರಕಟಿಸುವ ಬಗ್ಗೆ ಮತ್ತಷ್ಟು ಸೂಚನೆಗಳು.

**ಉಲ್ಲೇಖ:** ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 57 ಮಾಹಅ 04, ದಿನಾಂಕ: 14.9.2004.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ದಿನಾಂಕ: 14.9.2004ರ ಸುತ್ತೋಲೆಯಲ್ಲಿ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ ಅಡಿಯಲ್ಲಿ ಯಾವ ಯಾವ ಮಾಹಿತಿಯನ್ನು ಸ್ವಪ್ರೇರಿತವಾಗಿ (Suo-moto-obligation) ಪ್ರಕಟಪಡಿಸಬೇಕೆಂಬ ಬಗ್ಗೆ ವಿವರಗಳನ್ನು ನೀಡಲಾಗಿದೆ. ಅದರಂತೆ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು ಸಾರ್ವಜನಿಕರ ತಿಳುವಳಿಕೆಗಾಗಿ ತಮ್ಮ ಕಚೇರಿಯ ಕಾರ್ಯಚಟುವಟಿಕೆಗಳ ಬಗ್ಗೆ ಅಧಿಕಾರಿ/ಸಿಬ್ಬಂದಿ ವರ್ಗದವರು ಕರ್ತವ್ಯ/ಹೊಣೆಗಾರಿಕೆ ವಿವರಗಳನ್ನು, ಸಾರ್ವಜನಿಕರಿಗೆ ಲಭ್ಯವಿರುವ ಅನುಕೂಲಗಳ ವಿವರಗಳನ್ನು ಪ್ರಕಟಿಸುವುದು ಕಡ್ಡಾಯವೆಂಬುದನ್ನು ಮತ್ತೊಮ್ಮೆ ಸ್ಪಷ್ಟಪಡಿಸಿದೆ. ಸೂಚನಾ ಫಲಕದಲ್ಲಿ ಪ್ರಕಟಪಡಿಸಬೇಕಾದ ಈ ವಿವರಗಳ ಜೊತೆಗೆ **ಈ ಕೆಳಕಂಡ ನಮೂನೆಯಲ್ಲಿರುವಂತೆ ಸಂಕ್ಷಿಪ್ತ ವಿವರಗಳನ್ನು** ಸಹ ಎಲ್ಲಾ ಕಚೇರಿಗಳೂ ಪ್ರವೇಶದ್ವಾರದಲ್ಲಿಯೇ ಸಾರ್ವಜನಿಕರಿಗೆ ಎದ್ದು ಕಾಣುವಂತೆ ಪ್ರದರ್ಶಿಸಬೇಕೆಂದು ಸರ್ಕಾರವು ನಿರ್ದೇಶಿಸುತ್ತದೆ.

**ನಮೂನೆ**

**ಭಾಗ-1**

**ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ 2000**

**....................................... ರವರ ಕಚೇರಿ**

**ಮಾಹಿತಿ ಹಕ್ಕು ಅಧಿನಿಯಮ 2000ದ ಅಡಿಯಲ್ಲಿ ಈ ಕಚೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು.**

1. ದಾಖಲಾತಿಯನ್ನು 15 ದಿನಗಳಲ್ಲಿ ನೀಡಲಾಗುವುದು (ರಜೆ ದಿನಗಳನ್ನು ಹೊರತುಪಡಿಸಿ)
2. ಈ ಕಚೇರಿಯಲ್ಲಿ ಮಾಹಿತಿ / ದಾಖಲೆಗಳನ್ನು ನೀಡುವ ಅಧಿಕಾರಿ

**(ಸಕ್ಷಮ ಪ್ರಾಧಿಕಾರ)**

| ಅಧಿಕಾರಿಯ ಹೆಸರು | ಪದನಾಮ |
|---|---|
| | |

3. ಮಾಹಿತಿಯನ್ನು 15 ದಿನಗಳ ಒಳಗೆ ನೀಡದಿದ್ದ ಪಕ್ಷದಲ್ಲಿ ಮೇಲ್ಮನವಿ ಸಲ್ಲಿಸಬೇಕಾದ ಅಧಿಕಾರಿಯ ವಿವರಗಳು:

| ಅಧಿಕಾರಿಯ ಹೆಸರು | ಪದನಾಮ |
|---|---|
| | |

4. ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗೆ ನೀಡಬಹುದು.
   ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
   (ಜನಸ್ಪಂದನ) 20ನೇ ಮಹಡಿ, ವಿ.ವಿ. ಕೇಂದ್ರ, ಅಂಬೇಡ್ಕರ್ ರಸ್ತೆ, ಬೆಂಗಳೂರು-560 001

5. ಈ ಕಾಯ್ದೆಯ ಅಧಿನಿಯಮ ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತದೆ.

ಈ ಮಾಹಿತಿ http://kar.nic.in/vsb ವೆಬ್ ಸೈಟಿನಲ್ಲಿ ಲಭ್ಯವಿರುತ್ತದೆ.

ಕಚೇರಿಯ ಮುಖ್ಯಸ್ಥರು

**ಭಾಗ-2**

**ಈ ಕಚೇರಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಕೈಗೊಳ್ಳಲಾದ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳು**

1. ..........................................................................................................
2. ..........................................................................................................

ಕಚೇರಿಯ ಮುಖ್ಯಸ್ಥರು

ಮೇಲ್ಕಂಡ ನಮೂನೆಯಲ್ಲಿರುವ ಸಂಕ್ಷಿಪ್ತ ವಿವರಗಳನ್ನು ಇಲಾಖಾ ಮುಖ್ಯಸ್ಥರ ಕಚೇರಿ ಮಟ್ಟದಿಂದ ಪ್ರಾರಂಭಿಸಿ ಗ್ರಾಮ ಪಂಚಾಯಿತಿ ಮಟ್ಟದ ಎಲ್ಲಾ ಕಚೇರಿಗಳೂ ಕಚೇರಿಯ ಪ್ರವೇಶ ದ್ವಾರದಲ್ಲಿ ಪ್ರಕಟಿಸಿರುವುದನ್ನು ಖಚಿತಪಡಿಸಿಕೊಳ್ಳುವುದು ಆಯಾ ಇಲಾಖಾ ಮುಖ್ಯಸ್ಥರ/ಜಿಲ್ಲಾಧಿಕಾರಿಗಳ/ ಜಿಲ್ಲಾ ಪಂಚಾಯತ್‌ಗಳ/ ನಿಗಮ/ ಮಂಡಳಿಗಳ ಹೊಣೆಗಾರಿಕೆಯಾಗಿರುತ್ತದೆ.

ಸಿಆಸುಇ (ಜನಸ್ಪಂದನ) ಕೋಶದ ಅಧಿಕಾರಿಗಳು ಆಗಿಂದಾಗ್ಗೆ ಯಾವುದೇ ಕಚೇರಿ/ನಿಗಮ/ಮಂಡಳಿಗಳಿಗೆ-ಅನಿರೀಕ್ಷಿತ ಭೇಟಿ ನೀಡಿ ಮೇಲಿನಂತೆ ಕ್ರಮ ಜರುಗಿಸುವುದರ ಬಗ್ಗೆ ಪರಿಶೀಲಿಸುವರು. ಕರ್ತವ್ಯ ವಿಮುಖ ಅಧಿಕಾರಿಗಳ ಬಗ್ಗೆ ಶಿಸ್ತಿನ ಕ್ರಮ ಜರುಗಿಸಲು ಶಿಸ್ತು ಪ್ರಾಧಿಕಾರಕ್ಕೆ ಶಿಫಾರಸು ಮಾಡಲಾಗುವುದು. ಆದ್ದರಿಂದ ಮೇಲ್ಕಂಡ ಸೂಚನೆಗಳನ್ನು ತಪ್ಪದೆ ಪಾಲಿಸುವಂತೆ ಸೂಚಿಸಲಾಗಿದೆ.

**ಎಂ.ಸಿ. ಪೂಣಚ್ಚ**

ಪಿ.ಆರ್. 1189

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನ ಕೋಶ).

**AGRICULTURE AND HORTICULTURE SECRETARIAT**

**Sub :** Reservation of seats for Agriculturists or Children of Agriculturists in the University of Agricultural Sciences, Bangalore and Dharwad-Practical-regarding.

**Read:** 1) G.O. No. AHD 63 AUM 2003, Dated 10.7.2003.
2) Addendum No. AHD 63 AUM 2003, Dated 16.10.2003.

**Preamble:**

In the G.O. read at (1) above, some practical tests were prescribed for the purpose of admission of the candidates coming under the category of Agriculturists or their Children.

2. In the addendum dated 16.10.2003 read at (2) above, the following practical tests were deleted.

a) Ploughing over a short length
b) Yoking of Bullocks
c) How to approach cattle for milking
d) How to hold a lamb/sheep etc.,

And the following practical tests were included:

a) Identification of Forests species
b) Identification of Fodder crops and
c) Identification of Farm animals.

3. Government has re-examined the issue and decided to retain the practical tests prescribed in G.O. dated 10.7.2003 read at (1) above and also to retain the practical tests deleted in G.O. dated 16.10.2003. Further the following practical tests are also added to the G.O. 10.7.2003.

a) Transplanting of paddy
b) Harrowing over a short length
c) Seeds sowing
d) Weeding
e) Harvesting

**Government Order No. AHD 17 AUM 2004, Bangalore dated: 12th October 2004**

As stated in the preamble, Government are pleased to retain all the practical tests prescribed in Government Order No. AHD 63 AUM 2003, Dated: 10.7.2003 and dated 16.10.2003 and further add the following practical tests for the Agriculturists or their Children.

a) Transplanting of paddy
b) Harrowing over a short length
c) Seeds sowing
d) Weeding
e) Harvesting

It is ordered that the above said measures/conditions have to be adhered to strictly. The candidates seeking admission under Agriculturists/Children of Agriculturists category should secure minimum 50% marks in the Practical test failing which, they will not be eligible to avail the Agriculturists/ Children of Agriculturists quota to seek admission in the University of Agricultural Sciences.

By Order and in the name of Governor of Karnataka,

PR-1162

**M.S. Desai**
Under Secretary to Government,
Agriculture and Horticulture Department.

**ENERGY SECRETARIAT**

**Sub :** Power Bonds issued to CPSUs - Trading and servicing of over due interest.

**Read:**

1. Tripartite Agreement signed by GoK, Ministry of Power - GoI and the Reserve Bank of India on 20th March, 2003;
2. D.O. Letter No. IDMD No. 2291-08/05/03/2003-04 dated 27.11.03 from the Deputy General Manager, RBI, Mumbai;
3. D.O. Letter No. FD 1241 Exp-1/03 dated 16.12.2003 from Deputy Secretary (B&R) FD addressed to the Chief General Manager RBI, Mumbai;
4. Letter No. FD/1294/Exp-1/03 dated 16.2.2004.
5. Govt. Order No. DE 11 PSR 2001, Bangalore dated 20th March 2004;
6. Letter No. FD/1241/Exp-1/2003 dated 20.7.2004 from Under Secretary to Govt., Finance Department addressed to the CGM, RBI, Mumbai;
7. Letter No. FD/1241/Exp-1/2003 dated 27.7.2004.

**Preamble:**

In the D.O. letter dated 27.11.2003 read at (2) above, received from the Deputy General Manager, RBI, Mumbai; guidelines have been issued regarding trading and servicing of over due interest in respect of KPTCL dues towards CPSUs taken over by the Govt. of Karnataka in terms of the Tripartite agreement dated 20th March 2003 read at (1) above. In the said letter, Reserve Bank of India also stated that the Finance Department has to furnish an authority letter for debiting the Govt.'s account with them towards payment of overdue interest on the Power bonds issued to CPSUs amounting to Rs. 70.26 Crores. This is payable in three equal installments of Rs. 23.42 Crores each on 16.12.2003; 16.02.2004 and 15.06.2004.

Finance Department vide its letters dated 16.12.2003 and 16.02.2004 read at (3) & (4) above issued authority letters to RBI for debiting to GoK account, the overdue interest amounting to Rs. 23.42 Crores each being the first and second installment on 16.12.2003 and 16.02.2004. Accordingly a Govt. order No. DE 11 PSR 2001, dated 20th March, 2004 has already been issued.

Finance Department in its letter dated 20.7.2004 read at (6) above has issued further authority letter to RBI for debiting to GoK account the overdue interest amounting to Rs. 23.42 crores being the 3rd installment of overdue interest payable on 15.06.2004.

This amount has to be released from the provisions made for the RE subsidy during 2004-05 and book adjust the amount to interest payments with no cash out go involved. Hence the following order:

**Government Order No. DE 11 PSR 2001, Bangalore, Dated 14th October, 2004**

1. In the circumstances explained in the preamble, Government are pleased to approve the following:

   (i) To release Rs. 23.42 Crores as on 15.06.2004 under the head of account 2801-80-101-1-04-106 RE subsidy (NP) and book adjust the amount to interest payments; (There is no cash out go involved); and

   (ii) To authorize the Chief General Manager, RBI, Mumbai for debiting to Karnataka Govt.'s account with them towards the third instalment of overdue interest due as above on 15.6.2004.

2. This issues with the concurrence of the Finance Department vide their U.O. Note No. FD 1241 Exp-1/2003 dated 27.7.2004.

By Order and in the name of Governor of Karnataka,

PR-1170

**K.L. Jayaram**

Under Secretary to Government, Energy Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** 2004-05ನೇ ಸಾಲಿಗೆ ಗ್ರಾಮ ಪಂಚಾಯತಿಗಳಿಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 232 ಗ್ರಾಪಂಅ 2004, ದಿ: 10.6.2004.

2) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 8 ಜಿಪಅ 2004, (ಭಾಗ-2), ದಿನಾಂಕ: 2.7.2004.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ (1) ರಲ್ಲಿ 2004-05ನೇ ಸಾಲಿನ ಏಪ್ರಿಲ್, ಮೇ ಎರಡು ತಿಂಗಳುಗಳಿಗೆ ರೂ. 4710.00 ಲಕ್ಷದ ಅನುದಾನವನ್ನು ಪ್ರತಿ ಗ್ರಾಮ ಪಂಚಾಯತಿಗೆ ರೂ. 83,000.00 ರಂತೆ ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಪ್ರಸಕ್ತ ಸಾಲಿನ ಜೂನ್ ಮಾಹೆಯ ಒಂದು ತಿಂಗಳ ಅನುದಾನವಾದ ರೂ. 2355.00 ಲಕ್ಷವನ್ನು ಬಿಡುಗಡೆ ಮಾಡಿ ಆಯಾಯ ಗ್ರಾಮ ಪಂಚಾಯತಿಗಳ ಬ್ಯಾಂಕ್‌ಗೆ ಜಮೆ ಮಾಡುವ ಕುರಿತು ಅಗತ್ಯ ಕ್ರಮ ಕೈಗೊಳ್ಳಬೇಕೆಂದು ಸೂಚಿಸಿರುತ್ತದೆ. ಸರ್ಕಾರದ ಮಟ್ಟದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 316 ಗ್ರಾಪಂಅ 2004, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2004**

ರಾಜ್ಯದ ಗ್ರಾಮ ಪಂಚಾಯತಿಗಳಿಗೆ 2004-05ನೇ ಸಾಲಿನ ಜೂನ್ ತಿಂಗಳ ಅನುದಾನದ ಬಾಬ್ತು ರೂ. 2355.00 ಲಕ್ಷಗಳನ್ನು (ಎರಡು ಸಾವಿರದ ಮೂರನೂರ ಐವತ್ತೈದು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ "2515-00-198-1-07 (ಯೋಜನೆ)" ಯಡಿಯಿಂದ ಬಿಡುಗಡೆ ಮಾಡಲು ಹಾಗೂ ಈ ಅನುದಾನದ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ಪೇಯೀಸ್ ರಸೀತಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ರಾಜದೂತ್ ಕಾಂಪ್ಲೆಕ್ಸ್, ಒಂದನೇ ಮಹಡಿ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸಮನಾಗಿ ಲಭ್ಯವಾಗುವ ಮೊತ್ತ ರೂ. 41600.00 (ರೂಪಾಯಿ ನಲವತ್ತೊಂದು ಸಾವಿರದ ಆರುನೂರು ರೂ.ಗಳು ಮಾತ್ರ) ಗ್ರಾಮ ಪಂಚಾಯತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮೆ ಮಾಡಲು ಆದೇಶಿಸಲಾಗಿದೆ. ಹೀಗೆ ಲಭ್ಯವಾಗುವ ಮೊತ್ತ ರೂ. 41600 ರಲ್ಲಿ ವಿದ್ಯುಚ್ಛಕ್ತಿ ಬಾಕಿಯನ್ನು ಕಟಾಯಿಸಿ ಉಳಿದ ಹಣವನ್ನು ಗ್ರಾಮ ಪಂಚಾಯತಿಗಳಿಗೆ ನೀಡಬೇಕಾಗಿರುತ್ತದೆ. ಈ ರೀತಿ ಕಟಾಯಿಸಿದ ಹಣವನ್ನು ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ ನಿಯಮಿತಕ್ಕೆ (ಕೆ.ಪಿ.ಟಿ.ಸಿ.ಎಲ್.) ಪಾವತಿಸಬೇಕಾಗಿರುತ್ತದೆ.

ರಾಜ್ಯದ ಎಲ್ಲಾ 27 ಜಿಲ್ಲಾ ಪಂಚಾಯತಿಗಳಿಗೆ ಹಣವನ್ನು ಇದಕ್ಕೆ ಲಗತ್ತಿಸಿದ ಅನುಬಂಧದ ರೀತ್ಯಾ ಹಂಚಿಕೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 8 ಜಪಅ 2004 (ಭಾಗ 2) ದಿನಾಂಕ: 2.7.2004 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ**

| ಕ್ರಮ ಸಂಖ್ಯೆ | ಉಪ ಲೆಕ್ಕ ಶೀರ್ಷಿಕೆ | ಜಿಲ್ಲಾ ಪಂಚಾಯತಿ ಹೆಸರು | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 1 | 2 | 3 | 4 |
| 1 | 401 | ಬೆಂಗಳೂರು(ನ) | 46.59 |

| ಕ್ರಮ ಸಂಖ್ಯೆ | ಉಪ ಲೆಕ್ಕ ಶೀರ್ಷಿಕೆ | ಜಿಲ್ಲಾ ಪಂಚಾಯತಿ ಹೆಸರು | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 2 | 402 | ಬೆಂಗಳೂರು(ಗ್ರಾ) | 94.84 |
| 3 | 461 | ಬಾಗಲಕೋಟೆ | 67.80 |
| 4 | 413 | ಬೆಳಗಾಂ | 201.76 |
| 5 | 418 | ಬಳ್ಳಾರಿ | 78.62 |
| 6 | 419 | ಬೀದರ್ | 72.80 |
| 7 | 414 | ಬಿಜಾಪುರ | 82.78 |
| 8 | 408 | ಚಿಕ್ಕಮಗಳೂರು | 94.02 |
| 9 | 403 | ಚಿತ್ರದುರ್ಗ | 76.96 |
| 10 | 456 | ಚಾಮರಾಜನಗರ | 49.92 |
| 11 | 409 | ದಕ್ಷಿಣಕನ್ನಡ | 84.45 |
| 12 | 451 | ದಾವಣಗೆರೆ | 95.68 |
| 13 | 415 | ಧಾರವಾಡ | 52.83 |
| 14 | 462 | ಗದಗ | 44.10 |
| 15 | 417 | ಗುಲ್ಬರ್ಗ | 140.19 |
| 16 | 410 | ಹಾಸನ | 107.33 |
| 17 | 463 | ಹಾವೇರಿ | 85.70 |
| 18 | 411 | ಕೊಡಗು | 40.77 |
| 19 | 404 | ಕೋಲಾರ | 127.71 |
| 20 | 466 | ಕೊಪ್ಪಳ | 55.74 |
| 21 | 412 | ಮಂಡ್ಯ | 96.51 |
| 22 | 407 | ಮೈಸೂರು | 97.76 |
| 23 | 420 | ರಾಯಚೂರು | 68.22 |
| 24 | 405 | ಶಿವಮೊಗ್ಗ | 108.16 |
| 25 | 406 | ತುಮಕೂರು | 133.54 |
| 26 | 416 | ಉತ್ತರಕನ್ನಡ | 86.11 |
| 27 | 457 | ಉಡುಪಿ | 60.74 |
| | | ಒಟ್ಟು | 2351.63 |

**ಕೆ.ಎಸ್. ಶಾಮಸುಂದರ**

ಪಿ.ಆರ್. 1180

ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಶಿಕ್ಷಣ ಸಚಿವಾಲಯ**

**ಸುತ್ತೋಲೆ**

**ಕ್ರಮಾಂಕ: ಇಡಿ 11 ವಿವಿಧ 2004, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2004**

**ವಿಷಯ:** ರಾಜ್ಯ ಟೆಂಡರ್ ಬುಲೆಟಿನ್ ಪ್ರಕಟಣೆ ಬಗ್ಗೆ.

**ಉಲ್ಲೇಖ:** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮಗಳು 2000 - ಅಧಿಸೂಚನೆ ಸಂಖ್ಯೆ: ಲೋಇ/154/ಆಕೋ-3, 2000 (ಭಾಗ-1), ದಿನಾಂಕ: 24.8.2004.

ಶಿಕ್ಷಣ ಇಲಾಖೆಯ ಅಧೀನದಲ್ಲಿ ಬರುವ ಇಲಾಖೆಗಳು / ಮಂಡಳಿಗಳು / ವಿಶ್ವವಿದ್ಯಾನಿಲಯಗಳು ಸರ್ಕಾರಕ್ಕೆ ರಾಜ್ಯ ಟೆಂಡರ್ ಬುಲೆಟಿನ್‌ಗಳನ್ನು ಪ್ರಕಟಿಸುವ ಸಲುವಾಗಿ ಪ್ರಸ್ತಾವನೆಗಳನ್ನು ಸಲ್ಲಿಸುವಾಗ ಉಲ್ಲೇಖಿತ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮ 2000ದ ನಿಯಮ 4 ರಿಂದ 8 ರವರೆಗಿನನ್ವಯ ಕ್ರಮಕೊಳ್ಳಬೇಕೆಂದು ಸೂಚನೆಯನ್ನು ನೀಡಲಾಗಿರುತ್ತದೆ.

ಸದರಿ ನಿಯಮಗಳಲ್ಲಿ ಸೂಕ್ತ ಟೆಂಡರ್ ಬುಲೆಟಿನ್‌ಗಳ ನಿರ್ವಹಣೆ ಬಗ್ಗೆ ವಿವರಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಇಂತಹ ಪ್ರಸ್ತಾವನೆಗಳನ್ನು ಸಲ್ಲಿಸುವ ಸಂದರ್ಭದಲ್ಲಿ **ಸಂಗ್ರಹಣೆಯ ಮೌಲ್ಯಗಳು ಒಂದು ಕೋಟಿ ರೂಪಾಯಿಗಳು ಅಥವಾ ಅದಕ್ಕೂ ಹೆಚ್ಚಿದ್ದಾಗ ಅದನ್ನು ರಾಜ್ಯ ಟೆಂಡರ್ ಬುಲೆಟಿನ್‌ನಲ್ಲಿ ಸಹ ಪ್ರಕಟಿಸತಕ್ಕದ್ದು ಎಂಬುದಾಗಿ ಇರುತ್ತದೆ.**

ಇಂತಹ ಪ್ರಸ್ತಾವನೆಗಳನ್ನು ಸಲ್ಲಿಸುವ ಸಂದರ್ಭದಲ್ಲಿ ಇಲಾಖಾ ಮುಖ್ಯಸ್ಥರೇ ಈ ಬಗ್ಗೆ ನಿಗಾವಹಿಸಿ ಇಂತಹ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಕಳುಹಿಸುವ ಬಗ್ಗೆ ನಿಯಮಗಳನ್ನು ಮನದಟ್ಟು ಮಾಡಿಕೊಂಡು ಪ್ರಸ್ತಾವನೆಗಳನ್ನು ಸಲ್ಲಿಸಬೇಕೆಂದು ಈ ನಿಯಮಗಳಲ್ಲಿ ಸೂಚನೆಗಳು ಇರುತ್ತವೆ.

ಆದ್ದರಿಂದ, ಇನ್ನು ಮುಂದೆ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸುವಾಗ ನಿಯಮಗಳನ್ನು ಪಾಲಿಸತಕ್ಕದ್ದು.

**ಹೆಚ್. ಹನುಮಂತಪ್ಪ**

ಪಿ.ಆರ್. 1193

ಸರ್ಕಾರದ ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಶ್ರೀಮತಿ ಎಸ್. ಲೀಲಾವತಿ, ದ್ವಿತೀಯ ದರ್ಜೆ ಸಹಾಯಕಿ, ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು ಇವರ ವೈದ್ಯಕೀಯ ವೆಚ್ಚವನ್ನು ಮರುಪಾವತಿಸುವ ಬಗ್ಗೆ ಆದೇಶ.

**ಓದಲಾಗಿದೆ:** ನಿರ್ದೇಶಕರು, ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಅವರ ಕಛೇರಿಯ ದಿನಾಂಕ: 3:9.10.2001 ರ ಪತ್ರ ಸಂಖ್ಯೆ: ಪಿ(ಪಿ) 190: 2001-02.

**ಪ್ರಸ್ತಾವನೆ:-**

ಮೇಲೆ ಕಾಣಿಸಿದ ದಿನಾಂಕ: 3:9.10.2001 ರ ಪತ್ರದಲ್ಲಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ನಿರ್ದೇಶಕರು, ಶ್ರೀಮತಿ ಎಸ್. ಲೀಲಾವತಿ, ಅವರು ತಮ್ಮ ಮನೆಗೆ ಹತ್ತಿರವಾದ ಯಾವುದೇ ಸರ್ಕಾರಿ ಆಸ್ಪತ್ರೆ ಇಲ್ಲದಿದ್ದ ಕಾರಣ ದಿನಾಂಕ: 28.5.2001 ರಂದು ರಾತ್ರಿ ಸುಮಾರು 1.30 ಗಂಟೆಗೆ ಖಾಸಗಿ ಆಸ್ಪತ್ರೆಗೆ ದಾಖಲಾಗಿ ಕಾಲ ತುಂಬುವ ಮುನ್ನ (ಪ್ರಿಮೆಚ್ಯೂರ್) 1.45 ಕೆ.ಜಿ. ತೂಕವಿದ್ದ ಮಗುವಿಗೆ ಜನ್ಮ ನೀಡಿದ್ದಾರೆಂದೂ, ಅವರ ಮತ್ತು ಅವರ ಮಗುವಿನ ಪ್ರಾಣ ರಕ್ಷಣೆಗಾಗಿ ವೆಚ್ಚವಾದ ರೂ. 15,747.00 ಮತ್ತು ರೂ. 2,692.00 ಗಳನ್ನು ಮರುಪಾವತಿಸುವ ಬಗ್ಗೆ ಮಂಜೂರಾತಿ ಕೋರಿ ಪ್ರಸ್ತಾವನೆ ಕಳುಹಿಸಿದ್ದಾರೆ.

ಈ ಪ್ರಕರಣವನ್ನು ಸೂಕ್ತ ದಾಖಲೆಗಳೊಂದಿಗೆ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 144 ಡಿಜಿಒ 2004, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀಮತಿ ಎಸ್. ಲೀಲಾವತಿ, ದ್ವಿತೀಯ ದರ್ಜೆ ಸಹಾಯಕಿ, ಅವರು ಹೆರಿಗೆಗಾಗಿ ದಿನಾಂಕ: 28.5.2001 ರಿಂದ 8.6.2001 ರವರೆಗೆ ಬೆಂಗಳೂರು ಚಿಲ್ಡ್ರನ್ ಆಸ್ಪತ್ರೆ ಮತ್ತು ರೀಸರ್ಚ್ ಸೆಂಟರ್, ರಾಜರಾಜೇಶ್ವರಿನಗರ, ಬೆಂಗಳೂರು ಇಲ್ಲಿ ದಾಖಲಾಗಿ ಚಿಕಿತ್ಸೆ ಪಡೆದ ಬಾಬ್ತು ರೂ. 5,000.00 ಗಳನ್ನು (ಐದು ಸಾವಿರ ರೂಪಾಯಿಗಳು ಮಾತ್ರ) ಮಾತ್ರ ಹಿಂಬರಿಸಲು ಆದೇಶಿಸಿದೆ. ಈ ವೆಚ್ಚವನ್ನು ಇಲಾಖೆಯ ಲೆಕ್ಕಶೀರ್ಷಿಕೆಯ ಸವಿವರ ಲೆಕ್ಕ ಶೀರ್ಷಿಕೆ 014 ಲೆಕ್ಕ ಶೀರ್ಷಿಕೆಯಲ್ಲಿ ಭರಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 12.3.2004 ರಂದು ಅ.ಟಿ. ಸಂಖ್ಯೆ: ಆಇ5:ವೆಚ್ಚ-8:2004 ರಲ್ಲಿ ಹಾಗೂ ಸಿ.ಆ.ಸು. ಇಲಾಖೆಯು ದಿನಾಂಕ: 19.4.2002 ರಂದು ಅ.ಟಿ. ಸಂಖ್ಯೆ: ಸಿಆಸುಇ 453 ಸೇನಿಎಫ್ 2002 ರಲ್ಲಿ ನೀಡಿದ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1194

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1, 2)

## PERSONNEL AND ADMINISTRATIVE REFORMS SECRETARIAT

**Sub :** Continuation of one cadre post of Superintendent of Police, Intelligence, Mangalore

**Read:**
1. G.O. No. DPAR 1 SPS 2003 (P-1), dated 7.2.2004.
2. Letter No. CBI/1/2003-04, dated 7.8.2004, from the Director General and Inspector General of Police, Bangalore.

**Preamble:**

In the G.O. dated 7.2.2004 read at (1) above, the cadre post of Superintendent of Police, Intelligence, Bangalore held by Sri Ramesh S. Harihar, IPS (KN:95) was shifted to Mangalore alongwith the incumbent w.e.f. 7.2.2004 for a period of six months or until further orders whichever was earlier.

In the letter dated 7.8.2004 read at (2) above, the Director General and Inspector General of Police, Bangalore while stating that the period of 6 months referred to above ended on 7.8.2004, has sought orders of Government for continuing the cadre post of Superintendent of Police, Intelligence, Mangalore for a further period of one more year from 8.8.2004.

The proposal of the DG and IGP, Bangalore has been examined. Hence the following order.

**G.O. No. DPAR 85 SPS 2004, Bangalore, Dated 20th October 2004**

The cadre post of Superintendent of Police, Intelligence, Bangalore held by Sri Ramesh S. Harihar, IPS (KN:95) shifted to Mangalore, alongwith the incumbent is further continued to be so shifted for a period of one more year from 8.8.2004 or until further orders whichever is earlier.

By Order and in the name of Governor of Karnataka,

PR-1196

**B.V. Kumaraswamy**

Under Secretary to Government, DPAR (Services-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಎ. ಲಾಲಗೊಂಡರ್, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಕ್ರಮಾಂಕ: ಸಿಆಸುಇ 124 ಎಸ್‌ಇಎನ್ 2001, ದಿನಾಂಕ: 5.4.2002.
2) ಶ್ರೀ ಬಿ.ಎ. ಲಾಲ್‌ಗೊಂಡರ್, ಅವರ ದಿನಾಂಕ: 22.4.2002ರ ಉತ್ತರ.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 124 ಎಸ್‌ಇಎನ್ 2001, ದಿನಾಂಕ: 28.11.2002.
4) ಶ್ರೀ ಎಸ್. ಇಂಧುದರ್, ನಿವೃತ್ತ ನ್ಯಾಯಾಧೀಶರ ದಿನಾಂಕ: 15.9.2003 ರ ವಿಚಾರಣಾ ವರದಿ.

**ಪ್ರಸ್ತಾವನೆ:-**

ಶ್ರೀ ಬಿ.ಎ. ಲಾಲಗೊಂಡರ್, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಅವರು ದಿನಾಂಕ: 10.6.1992 ರಿಂದ 23.7.1994 ರ ಅವಧಿಯಲ್ಲಿ ಗುಲ್ಬರ್ಗಾ ಜಿಲ್ಲೆಯ ಹಿರಿಯ ಭೂ ವಿಜ್ಞಾನಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಮೆ: ಸೌತ್ ಇಂಡಿಯಾ ಸಿಮೆಂಟ್ ಕಂಪೆನಿಯವರು, ಪಡೆದಿದ್ದ ಗಣಿ ಗುತ್ತಿಗೆಗೆ ಸಂಬಂಧಿಸಿದಂತೆ ಸುಣ್ಣ ಕಲ್ಲಿನ ಮೇಲೆ ರಾಜಧನವನ್ನು ಲೆಕ್ಕಾಚಾರ ಹಾಕುವಲ್ಲಿ ಕೇವಲ ಗುತ್ತಿಗೆದಾರರು ನೀಡಿದ ಮಾಹಿತಿ ಆಧಾರದ ಮೇಲೆ ರಾಜಧನವನ್ನು ನಿರ್ಧರಿಸಿ ರೂ. 436.30 ಲಕ್ಷಗಳಷ್ಟು ರಾಜಧನವನ್ನು ನಿರ್ಧರಿಸುವ ಬದಲು ರೂ. 333.18 ಲಕ್ಷಗಳಷ್ಟು ಮೊತ್ತವನ್ನು ನಿರ್ಧರಿಸುವ ಮೂಲಕ ಸರ್ಕಾರಕ್ಕೆ ಬರಬೇಕಾಗಿದ್ದ ರೂ. 103.16 ಗಳಷ್ಟು ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪಕ್ಕಾಗಿ

ಅವರ ಮೇಲೆ ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ: 5.4.2002 ರ ನೋಟೀಸ್‌ನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡಿ, ಸಮಜಾಯಿಷಿ ಕೇಳುವ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ದೋಷಾರೋಪಣೆಗೆ ಪ್ರತ್ಯುತ್ತರವಾಗಿ, ಶ್ರೀ ಬಿ.ಎ. ಲಾಲಗೊಂಡರ್ ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 22.4.2002 ರ ಪ್ರತಿವಾದದ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲೆ ಹೊರಿಸಲಾದ ಆರೋಪವನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ಕಂಡುಕೊಳ್ಳುವ ಸಲುವಾಗಿ ವಿಚಾರಣೆ ನಡೆಸುವುದು ಅತ್ಯಾವಶ್ಯಕವಾಗಿದೆಯೆಂದು ಸರ್ಕಾರವು ತೀರ್ಮಾನಿಸಿ ಮೇಲೆ (3) ರಲ್ಲಿ ಓದಲಾದ ದಿನಾಂಕ: 28.11.2002 ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ಇಂಧುದರ್ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4) ರಲ್ಲಿ ಓದಲಾದ ದಿನಾಂಕ; 15.9.2003 ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಶ್ರೀ ಬಿ.ಎ. ಲಾಲಗೊಂಡರ್, ಅಪರ ನಿರ್ದೇಶಕರು, ಅವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದಿಲ್ಲವೆಂಬ ನಿರ್ಣಯವನ್ನು ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 124 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಬಿ.ಎ. ಲಾಲಗೊಂಡರ್, ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಅವರ ವಿರುದ್ಧ ದಿನಾಂಕ: 5.4.2002 ರ ನೋಟೀಸ್‌ನಲ್ಲಿ ಮಾಡಲಾದ ಆರೋಪದಿಂದ ಆರೋಪ ಮುಕ್ತರನ್ನಾಗಿಸುತ್ತದೆ. ಹಾಗೂ ಶ್ರೀ ಬಿ.ಎ. ಲಾಲಗೊಂಡರ್ ರವರು ಈ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯ ಪಡೆಯುತ್ತಿದ್ದರೊ ಆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1197

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಅಡಿವೆಪ್ಪ ಚಿಂಚೋಳಿ, ನಿವೃತ್ತ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇ ಲಾಖೆ, ರಾಯಚೂರು, (ಹಿಂದಿನ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇ ಲಾಖೆ, ಗುಲ್ಬರ್ಗಾ) ಇ ವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ-ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇ ಡಿ 100 ಡಿಜಿಡಿ 99 ದಿ:27.10.2000
2. ಅಧಿಸೂಚನೆ ಸಂಖ್ಯೆ:ಇ ಡಿ 100 ಡಿಜಿಡಿ 99 ದಿ:17.2.2001
3. ಸೂಚನಾ ಪತ್ರ ಸಂಖ್ಯೆ:ಇ ಡಿ 100 ಡಿಜಿಡಿ 99 ದಿ:17.7.2001
4. ಸರ್ಕಾರಿ ಆದೇಶ ಸಂ:ಇ ಡಿ 100 ಡಿಜಿಡಿ 99 ದಿ:25.8.2001
5. ಪ್ರಾಂಶುಪಾಲರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ ಹಾಗೂ ವಿಚಾರಣಾಧಿಕಾರಿ, ಇ ವರ ವಿಚಾರಣಾ ವರದಿ ಸಂ:ಅ1.ದೂರು: ವಿಚಾರಣೆ:ಸಿಟಿಇ ಗು:4:2001-02, ದಿ:4.5.2002
6. 2ನೇ ಕಾರಣ ಕೇಳುವ ನೋಟೀಸ್ ಸಂ:ಇ ಡಿ 100 ಡಿಜಿಡಿ 99 ದಿ:16.6.2003
7. ಶ್ರೀ ಅಡಿವೆಪ್ಪ ಚಿಂಚೋಳಿ, ಇ ವರ ಪ್ರತಿರಕ್ಷಣಾ ಹೇಳಿಕೆ ದಿ:10.7.2003
8. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಇ ವರ ಪತ್ರ ಸಂ:ಪಿಎಸ್‌ಸಿ 129:ಸಿಎಸ್‌ಎಸ್. 03:ದಿ:22.12.2003

**ಪ್ರಸ್ತಾವನೆ:**

ಶ್ರೀ ಅಡಿವೆಪ್ಪ ಚಿಂಚೋಳಿ, ನಿವೃತ್ತ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇ ಲಾಖೆ, ರಾಯಚೂರು, ಇ ವರು ಉಪನಿರ್ದೇಶಕರಾಗಿ ಗುಲ್ಬರ್ಗಾದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಗುಲ್ಬರ್ಗಾ ಜಿಲ್ಲೆಯ 21 ಪದವಿ ಪೂರ್ವ ಕಾಲೇಜುಗಳ ಸಂಚಿತ ನಿಧಿಯಿಂದ ಒಟ್ಟು ರೂ.8,44,000/- ಗಳನ್ನು ಪ್ರಾಂಶುಪಾಲರುಗಳಿಂದ ಪಡೆದು ಅದಕ್ಕೆ ಸರಿಯಾದ ವಿವರಗಳನ್ನು ದಾಖಲಿಸದೆ ಸ್ವಂತಕ್ಕೆ ಉಪಯೋಗಿಸಿಕೊಳ್ಳುವ ಮೂಲಕ ಸರ್ಕಾರಿ ಹಣ ದುರುಪಯೋಗ ಪಡಿಸಿಕೊಂಡಿದ್ದಾರೆಂಬ ಹಾಗೂ ರಾಜ್ಯಮಟ್ಟದ ಕ್ರೀಡಾಕೂಟಕ್ಕಾಗಿ ಇ ಲಾಖೆಯಿಂದ ಬಿಡುಗಡೆಯಾದ ಹಣಕ್ಕೆ ಯಾವುದೇ ಲೆಕ್ಕಪತ್ರ ನಿರ್ವಹಿಸದೆ ದುರುಪಯೋಗ ಪಡಿಸಿಕೊಂಡಿದ್ದಾರೆಂಬ ಆರೋಪಗಳ ಮೇರೆಗೆ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:27.10.2000 ರ ಆದೇಶದ ಮೂಲಕ ಅಮಾನತ್ತಿನಲ್ಲಿಟ್ಟು, ತದನಂತರ ದಿನಾಂಕ:17.2.2001 ರ ಅಧಿಸೂಚನೆಯಲ್ಲಿ ವಿಚಾರಣೆ ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (3) ರ ದಿ:17.7.2001 ರಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಲಾಗಿದ್ದು, ಆಪಾದಿತರು ಯಾವುದೇ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿಲ್ಲ. ಪ್ರಕರಣದ ಬಗ್ಗೆ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಾಂಕ (4) ರ ಸರ್ಕಾರಿ ಆದೇಶದಲ್ಲಿ ಪ್ರಾಂಶುಪಾಲರು, ಸಿಟಿಇ , ಗುಲ್ಬರ್ಗಾ, ಇ ವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ, ಇ ವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ ಓದಲಾದ (5) ರ ದಿನಾಂಕ:4.5.2002 ರಂದು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿನ ನಿರ್ಣಯದಲ್ಲಿ ಆಪಾದಿತರ ಮೇಲಿನ ಆರೋಪವು ಸಾಬೀತಾಗಿದೆ ಎಂದು ತಿಳಿಸಿದ್ದರಿಂದ ಮೇಲೆ ಓದಲಾದ ಕ್ರಮಾಂಕ (6) ರ ದಿನಾಂಕ:16.6.2003 ರಲ್ಲಿ ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಆಪಾದಿತರಿಗೆ ಜಾರಿಗೊಳಿಸಲಾಗಿದೆ.

**ಆಪಾದಿತರು ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ಕೆಳಕಂಡಂತೆ ದಿನಾಂಕ 10.07.2003 ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿದ್ದಾರೆ:-**

''1) ಗುಲ್ಬರ್ಗಾ ಪದವಿ ಪೂರ್ವ ಶಿಕ್ಷಣ ಇ ಲಾಖಾ ಉಪನಿರ್ದೇಶಕರ ಕಚೇರಿಯು ಅಸ್ತಿತ್ವಕ್ಕೆ ಬಂದಾಗ ಹೊಸ ಕಚೇರಿ ತೆರೆಯಲು ಹಾಗೂ ನಡೆಸಿಕೊಂಡು ಹೋಗಲು ಸರ್ಕಾರೇತರ ಹಣವನ್ನು ಡ್ರಾ ಮಾಡಿಕೊಂಡು ಉಪಯೋಗಿಸಬಾರದು ಎಂದು ಎಲ್ಲೂ ತಿಳಿಸಿಲ್ಲ. ನಿರ್ದೇಶಕರು ದಿ:

4.9.2000 ರಂದು ಹೊರಡಿಸಲಾದ ಸುತ್ತೋಲೆಯಲ್ಲಿ ಜಿಲ್ಲಾ ಉಪನಿರ್ದೇಶಕರುಗಳು ಕಾಲೇಜುಗಳಿಂದ ಸರ್ಕಾರೇತರ ಹಣವನ್ನು ಪಡೆಯಲು ನಿಷೇದಿಸಲಾಗಿದೆ. ಅದಕ್ಕೂ ಮೊದಲು ಈ ಆದೇಶ ಇ ರಲಿಲ್ಲ ಹಾಗೂ ಉಪನಿರ್ದೇಶಕರಿಗೆ ಹಣ ಉಪಯೋಗಿಸುವ ceiling limit ಬಗ್ಗೆ ಯಾವುದೇ ಆದೇಶವಿಲ್ಲ. ಅದೇ ರೀತಿಯಲ್ಲಿ ಟೆಲಿಫೋನ್ ವೆಚ್ಚಕ್ಕೂ ಇ ರಲಿಲ್ಲ. ಆದ್ದರಿಂದ ಸರ್ಕಾರದ ಆದೇಶವನ್ನು ನಿರೀಕ್ಷಿಸಿ ಸರ್ಕಾರೇತರ ಹಣವನ್ನು ಉಪಯೋಗಿಸಿಕೊಂಡು ಕಚೇರಿ ನಡೆಸಲು ವೆಚ್ಚ ಮಾಡಲಾಗಿದ್ದು ಇ ದು ತಪ್ಪು ಎಂದು ಪರಿಗಣಿಸಲು ಬರುವುದಿಲ್ಲ.

2) ಉಪನಿರ್ದೇಶಕರ ಕಚೇರಿಯನ್ನು ಹೊಸದಾಗಿ ಪ್ರಾರಂಭಿಸಲಾಗಿದ್ದು, ಕಚೇರಿಗೆ ಅಗತ್ಯವಾಗಿ ಬೇಕಾಗಿದ್ದ ಲೇಖನ ಸಾಮಗ್ರಿ ಪೀಠೋಪಕರಣಗಳನ್ನು ಸರ್ಕಾರೇತರ ಹಣದಿಂದ ಸರ್ಕಾರದ ನಿಯಮದಂತೆ ಖರೀದಿಸಲಾಗಿದೆ. ಇ ದರಿಂದಾಗಿ ಇ ಲಾಖೆಯು ಆರೋಪ ಮಾಡಲು ಯಾವುದೇ ಆಧಾರವಿರುವುದಿಲ್ಲ.

3) ವಿಚಾರಣಾಧಿಕಾರಿಗಳು ಮೇಲ್ಕಂಡ ಅಂಶಗಳನ್ನು ವಿಚಾರಣೆಯಲ್ಲಿ ಪರಿಶೀಲಿಸಲು ವಿಫಲರಾಗಿ, ನಿಯಮಬಾಹಿರವಾಗಿ ಖರ್ಚು ಮಾಡಿದ್ದಾರೆಂದು ನಿರ್ಣಯಿಸಿದ್ದಾರೆ. ವಿಚಾರಣಾಧಿಕಾರಿಗಳು ಯಾವ ರೂಲ್ಸ್ ಮತ್ತು ರೆಗ್ಯುಲೇಷನ್ಸ್ ಅನ್ನು ನಾನು ಉಲ್ಲಂಘನೆ ಮಾಡಿದ್ದೇನೆಂದು ವಿವರವಾಗಿ ತಿಳಿಸಿಲ್ಲ. ವಿಚಾರಣಾಧಿಕಾರಿಗಳ ನಿರ್ಣಯವು ಸ್ಪಷ್ಟವಾಗಿ ಹಾಗೂ ನಿಖರವಾಗಿ ಇ ರಬೇಕು. ಆದರೆ ವಿಚಾರಣಾಧಿಕಾರಿಗಳು ಯಾವುದೇ ಆಧಾರವಿಲ್ಲದೆ ನಿರ್ಣಯ ನೀಡಿದ್ದಾರೆ. ವಿಚಾರಣಾಧಿಕಾರಿಗಳು ಪ್ರಕರಣವನ್ನು ವಿಚಾರಣೆಯಲ್ಲಿ ನೀಡುವ ಹೇಳಿಕೆ ಹಾಗೂ ದಾಖಲೆಗಳ ಆಧಾರದ ಮೇಲೆ ನಿರ್ಣಯ ನೀಡಬೇಕಾಗುತ್ತದೆ. ಆದರೆ ವಿಚಾರಣಾಧಿಕಾರಿಗಳು ಈ ಆಧಾರದ ಮೇಲೆ ನಿರ್ಣಯಕ್ಕೆ ಬಂದಿಲ್ಲ.

4) ಆರೋಪ 1ಕ್ಕೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ನಿರ್ದಿಷ್ಟ ಅಭಿಪ್ರಾಯ ನೀಡಿಲ್ಲ. ವಿಚಾರಣೆಯ ಸಂದರ್ಭದಲ್ಲಿ ನಾನು ಕಚೇರಿಗೆ ಸಂಬಂಧಿಸಿದಂತೆ ಖರೀದಿಸಿದ ಬಿಲ್ಲುಗಳಿಗೆ ಸಂಬಂಧಿಸಿದಂತೆ ಕಚೇರಿಯ ವೆಚ್ಚಕ್ಕಾಗಿ ಹಣ ಉಪಯೋಗಿಸಲಾಗಿದೆ ಎಂದು ತಿಳಿಸಿದ್ದಾರೆ. ಹಾಗೂ ಟೆಲಿಫೋನ್ ವೆಚ್ಚವು ಕಚೇರಿಯ ಉಪಯೋಗಕ್ಕಾಗಿ ಮಾಡಲಾಗಿದೆ ಎಂದು ತಿಳಿಸಿದ್ದಾರೆ. ಆದರೆ ಹಣ ದುರುಪಯೋಗ ಪಡಿಸಿಕೊಂಡಿದ್ದಾರೆಂದು ಸಹ ತಿಳಿಸಿದ್ದರಿಂದ ಇ ದು ಈ ನಿರ್ಣಯ ವ್ಯತಿರಿಕ್ತವಾಗಿದೆ. ಮುಂದುವರಿದು ಖರ್ಚು ಮಾಡಲಾದ ಹಣದಲ್ಲಿ ಎಷ್ಟು ಮೊತ್ತವನ್ನು ಆಪಾದಿತರಿಂದ ವಸೂಲಿ ಮಾಡಬೇಕು ಎಂಬುದರ ಬಗ್ಗೆ ಪರಿಶೀಲಿಸಿ ನಿರ್ಣಯ ಕೈಗೊಳ್ಳಲು ಇ ಲಾಖಾ ಮುಖ್ಯಸ್ಥರ ಮೇಲೆ ಜವಾಬ್ದಾರಿಯನ್ನು ವಿಚಾರಣಾಧಿಕಾರಿಗಳು ಮಾಡಿದ್ದಾರೆ.

5) ಶಿಸ್ತು ಪ್ರಾಧಿಕಾರಿಯು ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ದಂಡನೆಯನ್ನು ಪ್ರಸ್ತಾಪಿಸಿಲ್ಲ. ವಿಚಾರಣೆ ಯಲ್ಲಿ ನಾನು ಸಲ್ಲಿಸಿದಂತಹ ದಾಖಲೆ ಹಾಗೂ ಹೇಳಿಕೆಗಳನ್ನು ಗಣನೆಗೆ ತೆಗೆದುಕೊಂಡಿಲ್ಲ. ಸರ್ಕಾರವು 2ನೇ ಕಾರಣ ಕೇಳುವ ನೋಟೀಸಿನಲ್ಲಿ ಪ್ರಸ್ತಾಪಿಸಲಾದ ದಂಡನೆಯ ವಿಚಾರದಲ್ಲಿ ಯಾವುದೇ ದಾಖಲೆಗಳನ್ನು ಪರಿಶೀಲಿಸದೆ ನಿರ್ಣಯಕ್ಕೆ ಬಂದಿದ್ದಾರೆ. ಇ ದರಿಂದಾಗಿ ನನ್ನಿಂದ ದುರುಪಯೋಗವಾಗಿದೆ ಎಂಬ ಮೊತ್ತ ರೂ. 7,89,029/- ರ ಬಗ್ಗೆ ಯಾವ ಆಧಾರದ ಮೇಲೆ ನಿರ್ಣಯಕ್ಕೆ ಬಂದಿದ್ದಾರೆ ಎಂಬುದು ತಿಳಿಯುವುದಿಲ್ಲ. ಇ ದರಿಂದಾಗಿ 2ನೇ ಕಾರಣ ಕೇಳುವ ನೋಟೀಸಿನಲ್ಲಿ ನಮೂದಿಸಲಾದ ದಂಡನೆಯು ಉದ್ದೇಶ ಪೂರ್ವಕವಾಗಿದೆ.

6) ಎರಡನೇ ಕಾರಣ ಕೇಳುವ ನೋಟೀಸಿನಲ್ಲಿ ನನ್ನಿಂದ ರೂ.7,89,029/-ಗಳು ದುರುಪಯೋಗವಾಗಿದೆ ಎಂದು ತಿಳಿಸಲಾಗಿದ್ದು, ಈ ಮೊತ್ತದ ಬಗ್ಗೆ ವಿಚಾರಣಾಧಿಕಾರಿಗಳು ತನ್ನ ನಿರ್ಣಯದಲ್ಲಿ ನೀಡಿಲ್ಲ. ಆದ್ದರಿಂದ ಇ ದಕ್ಕೆ ಯಾವುದೇ ಆಧಾರವಿಲ್ಲ. ಅಲ್ಲದೆ ನನ್ನ ನಿವೃತ್ತಿ ವೇತನದಿಂದ ಶೇಕಡ 50 ರಷ್ಟು ಖಾಯಂ ಆಗಿ ಕಡಿಮೆ ಮಾಡುವ ನಿರ್ಣಯವು ಕಾನೂನಿಗೆ ವಿರುದ್ಧವಾಗಿದೆ. ಗ್ರಾಚುಟಿ ಮೊತ್ತವನ್ನು ಹಿಡಿದುಕೊಳ್ಳಲು ಅವಕಾಶವಿರುವುದಿಲ್ಲ. ಅದರಂತೆಯೇ ಕಮಿಟೆಡ್ ಪೆನ್‌ಷನ್ ಇ ದನ್ನು ತಡೆಹಿಡಿಯಲು ಅವಕಾಶವಿಲ್ಲ.

7) ನನ್ನ 30 ವರ್ಷಗಳ ಸೇವೆಯನ್ನು ಸಮರ್ಪಕವಾಗಿ ನಿರ್ವಹಿಸಿದ್ದೇನು. ನನ್ನ ಮೇಲೆ ಮಾಡಲಾದ ಆರೋಪದಲ್ಲಿ ಯಾವುದೇ ತಳಹದಿಯಿಲ್ಲ. ಆದ್ದರಿಂದ ಉದ್ದೇಶಿತ ದಂಡನೆಗೆ ಪ್ರಸ್ತಾಪಿಸಿರುವುದು ಕಾನೂನಿಗೆ ವಿರುದ್ಧವಾಗಿದೆ. ಆದ್ದರಿಂದ ನನಗೆ ಸಂಪೂರ್ಣ ನಿವೃತ್ತಿ ವೇತನ ಮತ್ತು ಎಲ್ಲಾ ಸೌಲಭ್ಯಗಳನ್ನು ಬಿಡುಗಡೆ ಮಾಡುವಂತೆ ಕೋರುತ್ತೇನೆ.''

ಆಪಾದಿತರು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯೊಂದಿಗೆ ಯಾವುದೇ ದಾಖಲೆಗಳನ್ನು ಹಾಜರುಪಡಿಸದೆ ಸರ್ಕಾರಿ ಹಣ ದುರುಪಯೋಗ ಪಡಿಸಿಲ್ಲವೆಂದು ತಿಳಿಸಿ, ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಅಲ್ಲಗಳೆದಿದ್ದಾರೆ. ಸದರಿಯವರು ಕಾಲೇಜುಗಳಿಂದ ಪಡೆದ ಹಣವನ್ನು ಖರ್ಚು ಮಾಡಿರುವ ಬಗ್ಗೆ ಯಾವುದೇ ದಾಖಲೆಗಳನ್ನು ನಿರ್ವಹಿಸದೆ, ಹಣವನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳುವ ಮೂಲಕ ದುರುಪಯೋಗಪಡಿಸಿ ಕೊಂಡಿರುವುದು ದಾಖಲೆಯಿಂದ ಸಾಬೀತಾಗಿದ್ದರಿಂದ, ದುರುಪಯೋಗಪಡಿಸಿಕೊಂಡ ಹಣವನ್ನು ವಸೂಲಿ ಮಾಡಲು ಹಾಗೂ ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿದೆ. ಈ ನಿರ್ಣಯಕ್ಕೆ ಮೇಲೆ ಓದಲಾದ ಕ್ರಮಾಂಕ (5) ರ ದಿನಾಂಕ:22.12.2003 ರ ಮೂಲಕ ಕರ್ನಾಟಕ ಲೋಕಸೇವಾ ಆಯೋಗವು ತನ್ನ ಸಹಮತಿ ನೀಡಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 100 ಡಿಜಿಡಿ 99 ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2004**

(1) ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಅಡಿವೆಪ್ಪ ಚಿಂಚೋಳಿ, ನಿವೃತ್ತ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇ ಲಾಖೆ, ರಾಯಚೂರು ಇ ವರ ಮೇಲೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರ ಮೇಲೆ ನಡೆಸಲಾದ ವಿಚಾರಣೆಯಲ್ಲಿ ಆರೋಪವು ಸಾಬೀತಾಗಿದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರ ಅಡಿಯಲ್ಲಿ ಸದರಿಯವರು ದುರುಪಯೋಗಪಡಿಸಿಕೊಂಡ ಒಟ್ಟು ರೂ.7,89,029/- ಗಳಲ್ಲಿ ಅವರ ನಿವೃತ್ತಿಯ ನಂತರ ಲಭ್ಯವಿರುವ ಕೆಳಕಂಡ ಮೂಲದಿಂದ ರೂ.5,69,246/- ಗಳನ್ನು (ಐದು ಲಕ್ಷದ ಅರವತ್ತೊಂಬತ್ತು ಸಾವಿರದ ಇ ನ್ನೂರ ನಲವತ್ತಾರು ರೂ.ಗಳು ಮಾತ್ರ) ವಸೂಲಿ ಮಾಡಲು ಆದೇಶಿಸಿದೆ.

| | |
|---|---|
| 1. ಗಳಿಕೆ ರಜೆ ನಗದೀಕರಣ | ರೂ.1,46,196/- |
| 2. ಡಿ.ಸಿ.ಆರ್.ಜಿ. | ರೂ.1,86,570/- |
| 3.ಕಮ್ಯೂಟೆಡ್ ವ್ಯಾಲ್ಯೂ ಆಫ್ ಪೆನ್‌ಷನ್ | ರೂ.2,36,480/- |

(2) ಶ್ರೀ ಅಡಿವೆಪ್ಪ ಚಿಂಚೋಳಿ, ಇ ವರು ದುರುಪಯೋಗ ಪಡಿಸಿಕೊಂಡ ಇ ನ್ನುಳಿದ ಬಾಕಿ ಮೊತ್ತ ರೂ.2,19,783/-ಗಳನ್ನು ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯಿಂದ ವಸೂಲಿ ಮಾಡಲು ಆದೇಶಿಸಿದೆ.

(3) ಶ್ರೀ ಅಡಿವೆಪ್ಪ ಚಿಂಚೋಳಿ, ಇ ವರ ನಿವೃತ್ತಿ ವೇತನವನ್ನು ಶೇಕಡ 50 ರಷ್ಟು (ಐವತ್ತರಷ್ಟು) ಖಾಯಂ ಆಗಿ ಕಡಿತಗೊಳಿಸಲು ಆದೇಶಿಸಿದೆ.

(4) ಅವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯ ನಿರ್ವಹಿಸದೆ ಇ ರುವ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಫ್.ಆರ್.ಸಂಬರಗಿ**

ಪಿ.ಆರ್. 1192 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(ಸೇ-1,2)

**ವಿಷಯ:** ಗ್ರಾಮೀಣ ಕೃಪಾಂಕದಡಿ ನೇಮಕಗೊಂಡು ಸರ್ವೋಚ್ಛ ನ್ಯಾಯಾಲಯದ ಆಜ್ಞೆಯ ಮೇರೆಗೆ ವಜಾಗೊಂಡು 2003ರ ವಿಶೇಷ ನೇಮಕಾತಿ ನಿಯಮಾವಳಿಗಳಡಿ ನೇಮಕ ಹೊಂದಲು ಸಾಧ್ಯವಾಗದೆ ಉಳಿದಿರುವ ಶಿಕ್ಷಕರನ್ನು ಅತಿಥಿ ಶಿಕ್ಷಕರಾಗಿ ನೇಮಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ 24–05–2003ರ ಸರ್ಕಾರಿ ಆದೇಶ ಸಂಖ್ಯೆ : ಇಡಿ 150 ಯೋಯೋಕ 2003.

2) ದಿನಾಂಕ 21–08–2004ರ ಪ್ರಾಥಮಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಸಿ3(1)ಗ್ರಾ ಕೃ 16 (ಎ) 2003–04.

**ಪ್ರಸ್ತಾವನೆ:–**

ಸನ್ಮಾನ್ಯ ಭಾರತದ ಸರ್ವೋಚ್ಛ ನ್ಯಾಯಾಲಯವು ನೇರ ನೇಮಕಾತಿಗಳಲ್ಲಿ ಗ್ರಾಮೀಣ ಕೃಪಾಂಕ ಪದ್ಧತಿ ಅಸಿಂಧುಗೊಳಿಸಿದ ಹಿನ್ನಲೆಯಲ್ಲಿ, ಗ್ರಾಮೀಣ ಕೃಪಾಂಕದ ಆಧಾರದ ಮೇಲೆ ರಾಜ್ಯದಲ್ಲಿ ನೇಮಕಗೊಂಡ 4406 ಪ್ರಾಥಮಿಕ ಶಾಲಾ ಶಿಕ್ಷಕರನ್ನು ಸೇವೆಯಿಂದ ವಜಾಗೊಳಿಸಲಾಗಿತ್ತು. ಹಾಗೆ ವಜಾಗೊಳಿಸಲಾದ ಪ್ರಾಥಮಿಕ ಶಾಲಾ ಶಿಕ್ಷಕರನ್ನು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು, 2003 ರ ಅಡಿ ಪುನರ್ ನೇಮಕ ಮಾಡಿಕೊಳ್ಳುವ ಪ್ರಕ್ರಿಯೆ ಜಾರಿಯಲ್ಲಿದ್ದಾಗ, ದಿನಾಂಕ 12–12–2003 ರಂದು ಸನ್ಮಾನ್ಯ ಭಾರತದ ಸರ್ವೋಚ್ಛ ನ್ಯಾಯಾಲಯ ಸದರಿ ವಿಶೇಷ ನೇಮಕಾತಿ ನಿಯಮಾವಳಿಗಳಿಗೆ ತಡೆಯಾಜ್ಞೆ ನೀಡಿತು. ಆದ್ದರಿಂದ ವಜಾಗೊಂಡ ಗ್ರಾಮೀಣ ಕೃಪಾಂಕ ಆಧಾರಿತ ಪ್ರಾಥಮಿಕ ಶಾಲಾ ಶಿಕ್ಷಕರ ಪೈಕಿ ರಾಜ್ಯಾದ್ಯಂತ 563 ಅಭ್ಯರ್ಥಿಗಳು ಪುನರ್ ನೇಮಕ ಪಡೆಯಲು ಸಾಧ್ಯವಾಗಿಲ್ಲ. (ಕನ್ನಡ 509; ಉರ್ದು 53; ದೈಹಿಕ ಶಿಕ್ಷಕ 01)

"ಅತಿಥಿ ಶಿಕ್ಷಕರ" ಯೋಜನೆಯನ್ನು ಸೂಕ್ತವಾಗಿ ಮಾರ್ಪಡಿಸಿ, ಮೇಲೆ ಹೇಳಿದ 563 ಪುನರ್ ನೇಮಕಾತಿಗೊಳ್ಳಲು ಸಾಧ್ಯವಾಗದ ಪ್ರಕರಣಗಳಿಗೆ ಮಾತ್ರ ಸೀಮಿತಗೊಳಿಸಿದಂತೆ, ಅಂತಹವರುಗಳನ್ನು ಅತಿಥಿ ಶಿಕ್ಷಕರಾಗಿ ನೇಮಕಾತಿ ಮಾಡಿಕೊಳ್ಳಲು; ಮತ್ತು ಅಂತಹ ಆದೇಶವು ಸನ್ಮಾನ್ಯ ಭಾರತದ ಸರ್ವೋಚ್ಛ ನ್ಯಾಯಾಲಯದ ಅಂತಿಮ ತೀರ್ಪಿಗೆ ಬದ್ಧವಾಗಿರುವ ಷರತ್ತಿಗೆ ಒಳಪಟ್ಟು, ಹಾಗೂ ದಿನವೊಂದಕ್ಕೆ ರೂ.100/-ರಂತೆ (ಒಂದುನೂರು ರೂಪಾಯಿಗಳು) ನಿವೃತ್ತ ಶಿಕ್ಷಕರನ್ನು ಮಾತ್ರ ತೆಗೆದುಕೊಳ್ಳಲು 2003-04ನೇ ಸಾಲಿನಿಂದ ವ್ಯವಸ್ಥೆ ಮಾಡಲಾಗಿದೆ ಎಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ತಿಳಿಸಿದ್ದಾರೆ.

ಮೇಲೆ 1 ರಲ್ಲಿ ಓದಲಾದ ದಿನಾಂಕ 24–05–2003ರ ಸರ್ಕಾರಿ ಆದೇಶದಲ್ಲಿ, ಶಿಕ್ಷಣ ಇಲಾಖೆಯ ಶಾಲಾ ಶಿಕ್ಷಣ ವಲಯದಡಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆ (ರಾಜ್ಯ ವಲಯ ಯೋಜನೆಗಳು), ಸಂಬಂಧಿಸಿದಂತೆ 2003–04 ನೇ ಸಾಲಿನ ಮುಂದುವರಿಕೆ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಅನುಮೋದನೆ ನೀಡಲಾಗಿದೆ. ಸದರಿ ಆದೇಶದ ಅನುಬಂಧದಲ್ಲಿ "ಪ್ರಾಥಮಿಕ ಶಿಕ್ಷಣ" ಎಂಬ ಶೀರ್ಷಿಕೆ ಅಡಿ, ಕಂಡಿಕೆ 8 (ಇ) ರಲ್ಲಿ ಕೆಳಕಂಡಂತೆ ಹೇಳಲಾಗಿದೆ.

"ಇ) ಪ್ರಸ್ತುತ ಮಂಜೂರಾತಿಯ ವಿವರಗಳು:–

ದಿನಾಂಕ 01–04–2003 ರಿಂದ 31–3–2004 ರ ವರೆಗೆ ಈ ಕಾರ್ಯಕ್ರಮಕ್ಕೆ ನಿಗದಿಯಾಗಿರುವ ರೂ.100.00 ಲಕ್ಷಗಳ (ರೂಪಾಯಿ ನೂರು ಲಕ್ಷಗಳು ಮಾತ್ರ) ಮಿತಿಯೊಳಗೆ ಹತ್ತು ದಿನಗಳಿಗಿಂತ ಹೆಚ್ಚು ಅವಧಿಗೆ ಪ್ರಾಥಮಿಕ ಶಾಲಾ ಶಿಕ್ಷಕರು ರಜೆ ಹೋದಾಗ ಅವರ ಸ್ಥಳದಲ್ಲಿ ನಿವೃತ್ತಿ ಶಿಕ್ಷಕರುಗಳನ್ನು ಬಳಸಿಕೊಂಡು ಶಾಲಾ ಶೈಕ್ಷಣಿಕ ಚಟುವಟಿಕೆಗಳನ್ನು ಮುಂದುವರೆಸಿ ಅವರುಗಳಿಗೆ ಗೌರವ ಸಂಭಾವನೆ ನೀಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆರವರಿಗೆ ಮಂಜೂರಾತಿ ನೀಡಿದೆ."

ಸದರಿ ಯೋಜನೆಗೆ 2004–05ನೇ ಸಾಲಿನಲ್ಲಿ ರೂ. 50 ಲಕ್ಷ ಅನುದಾನವನ್ನು ರಾಜ್ಯ ಬಜೆಟ್‌ನಲ್ಲಿ ಒದಗಿಸಲಾಗಿದೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 43 ಪಿಬಿಎಸ್ 2004, ಬೆಂಗಳೂರು, ದಿನಾಂಕ 19ನೇ ಅಕ್ಟೋಬರ್ 2004**

ಮೇಲ್ಕಂಡ ಸಂದರ್ಭಗಳಲ್ಲಿ 10(ಹತ್ತು) ದಿನಗಳಿಗಿಂತ ಹೆಚ್ಚು ಅವಧಿಗೆ ಪ್ರಾಥಮಿಕ ಶಾಲಾ ಶಿಕ್ಷಕರು ರಜೆ ಹೋದಾಗ, ಅವರ ಸ್ಥಳದಲ್ಲಿ ನಿವೃತ್ತ ಶಿಕ್ಷಕರ ಜೊತೆಗೆ, ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು 2003 ರ ಅಡಿ, ರಿಟ್ ಅರ್ಜಿ ಸಂಖ್ಯೆ 536/2003 – ಶ್ರೀ ಕೆ.ಎನ್.ಮೋಹನ ಮತ್ತು ಇತರರು–ವಿರುದ್ಧ–ಕರ್ನಾಟಕ ರಾಜ್ಯ ಮತ್ತಿತರು; ಮತ್ತು ರಿಟ್ ಅರ್ಜಿ ಸಂಖ್ಯೆ: 562/2003 – ಶ್ರೀ ಕಿರಣ ವಿಷ್ಣು ಕಾಂಬ್ಳೆ ಮತ್ತು ಇತರರು– ವಿರುದ್ಧ– ಕರ್ನಾಟಕ ರಾಜ್ಯ ಮತ್ತಿತರು, ಇವುಗಳಲ್ಲಿ ಸನ್ಮಾನ್ಯ ಭಾರತದ ಸರ್ವೋಚ್ಛ ನ್ಯಾಯಾಲಯವು ದಿನಾಂಕ 12–12–2003 ರಂದು ನೀಡಿದ ಮಧ್ಯಂತರ ಆದೇಶದ ಫಲವಾಗಿ ಪುನರ್ ನೇಮಕ ಪಡೆಯಲು ಸಾಧ್ಯವಾಗಿಲ್ಲದ 563 ಗ್ರಾಮೀಣ ಕೃಪಾಂಕ ಆಧಾರಿತ ಅಭ್ಯರ್ಥಿಗಳನ್ನೂ ಸಹ ಅತಿಥಿ ಶಿಕ್ಷಕರಾಗಿ ನೇಮಿಸಿಕೊಳ್ಳಲು ಈ ಮೂಲಕ ಅವಕಾಶ ಕಲ್ಪಿಸಿದೆ.

2. "ಅತಿಥಿ ಶಿಕ್ಷಕರ" ಯೋಜನೆಯ ಇತರ ಎಲ್ಲಾ ಷರತ್ತುಗಳು ಸದರಿ 563 ಅಭ್ಯರ್ಥಿಗಳನ್ನು ಅತಿಥಿ ಶಿಕ್ಷಕರನ್ನಾಗಿ ನೇಮಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಅನ್ವಯಿಸುತ್ತದೆ. ಈ ಆದೇಶದಡಿ "ಅತಿಥಿ ಶಿಕ್ಷಕ"ರಾಗಿ ನೇಮಕವಾಗುವವರು ಸದರಿ ಯೋಜನೆಯಡಿ ದಿನ ಒಂದಕ್ಕೆ ರೂ. 100–00 ರಂತೆ (ದಿನ ಒಂದಕ್ಕೆ ನೂರು ರೂಪಾಯಿಗಳು ಮಾತ್ರ) ಸಂಭಾವನೆ ಪಡೆಯಲು ಅರ್ಹರಾಗಿರುತ್ತಾರೆ. ಸದರಿ 563 ಅಭ್ಯರ್ಥಿಗಳ ವಿವರಗಳನ್ನು ಒಳಗೊಂಡ ಪಟ್ಟಿಯನ್ನು, ಅತಿಥಿ ಶಿಕ್ಷಕರನ್ನು ನೇಮಿಸಲು ಅಧಿಕಾರ ಹೊಂದಿರುವ ಪ್ರಾಧಿಕಾರಗಳಿಗೆ, ಪ್ರಾಥಮಿಕ ಶಿಕ್ಷಣ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಆಯುಕ್ತರ ಕಚೇರಿ, ಬೆಂಗಳೂರು ಇವರು ಕೂಡಲೇ ಒದಗಿಸತಕ್ಕದ್ದು. ಯಾವುದೇ ಅಭ್ಯರ್ಥಿ ಸದರಿ ೫೬೩ ಅಭ್ಯರ್ಥಿಗಳಲ್ಲಿ ಒಬ್ಬ ಎಂಬುದನ್ನು "ಅತಿಥಿ ಶಿಕ್ಷಕ" ನೇಮಕಾತಿ ಪ್ರಾಧಿಕಾರ ಹೇಗೆ ಗುರುತಿಸಬೇಕು ಮತ್ತು ಯಾವ ಸಾಕ್ಷ್ಯಾಧಾರಗಳನ್ನು ಅಂತಹ ಪ್ರಾಧಿಕಾರ ಅವಲಂಬಿಸಬೇಕು ಎಂಬ ಬಗ್ಗೆಯೂ ಸಹ,ಪ್ರಾಥಮಿಕ ಶಿಕ್ಷಣ ನಿರ್ದೇಶಕರು, ಸ್ಪಷ್ಟ ಸೂಚನೆ ಗಳನ್ನು ನೀಡತಕ್ಕದ್ದು.

3. ಈ ಆದೇಶವು ಮೇಲೆ ಹೇಳಿದ ರಿಟ್ ಅರ್ಜಿ ಸಂಖ್ಯೆ 536/2003 ಹಾಗೂ 562/2003 ರಲ್ಲಿ ಸನ್ಮಾನ್ಯ ಭಾರತದ ಸರ್ವೋಚ್ಛ ನ್ಯಾಯಾಲಯವು ಅಂತಿಮ ಆದೇಶ ನೀಡಿದ ತಕ್ಷಣ ತಂತಾನೇ ರದ್ದಾಗುತ್ತದೆ. ಆ ಅವಧಿಯೊಳಗೆ ಸರ್ಕಾರ ಈ ಆದೇಶವನ್ನು ರದ್ದು ಗೊಳಿಸಲೂಬಹುದು.

4. ಈ ಆದೇಶವನ್ನು ದಿನಾಂಕ 7–9–2004ರ ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿ.ಆ.ಸು.ಇ 1400/ಸೇನಿಎ 2004ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ನೀಡಿರುವ ಸಹಮತಿ ಹಾಗೂ ದಿನಾಂಕ : 18–10–2004ರ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಲ್‌ಎಡಬ್ಲೂ 767 ಒಪಿನಿಯನ್/ 2004ರಲ್ಲಿ ಕಾನೂನು ಇಲಾಖೆಯು ನೀಡಿರುವ ಅಭಿಪ್ರಾಯದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1195

**ಬಿ.ಹೆಚ್.ಪಡಸಲಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:–** ಶ್ರೀ ಎಸ್.ಸಿ.ಚೆನ್ನಯ್ಯ, ಸಮಾಜ ಕಾರ್ಯಕರ್ತರು ಹಾಗೂ ವೃತ್ತಿ ಸಲಹೆಗಾರರು, ಜಿಲ್ಲಾ ಪುನರ್ವಸತಿ ಕೇಂದ್ರ, ಮೈಸೂರು ಇವರ ನಿಯೋಜನೆ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:–** ಸಂ.ಮಮಅಇ:ನಿಸಿಗೆ:39:03–04 ದಿನಾಂಕ:15–9–2003ರ ನಿರ್ದೇಶನಾಲಯದ ಪ್ರಸ್ತಾವನೆ.

**ಸರ್ಕಾರಿ ಆದೇಶ ಸಂಖ್ಯೆ. ಮಮಇ 183 ಎಸ್‌ಜಿಡಿ 2004 ಬೆಂಗಳೂರು ದಿನಾಂಕ: 27ನೇ ಸೆಪ್ಟೆಂಬರ್ 2004**

ಶ್ರೀ ಎಸ್.ಸಿ.ಚನ್ನಯ್ಯ ಸಮಾಜ ಕಾರ್ಯಕರ್ತರು ಹಾಗೂ ವೃತ್ತಿ ಸಲಹೆಗಾರರವರನ್ನು ಜಿಲ್ಲಾ ಪುನರ್ವಸತಿ ಕೇಂದ್ರ, ಮೈಸೂರಿಗೆ ನಿಯೋಜಿಸಲು ನಿಬಂಧನೆ ಷರತ್ತು ಮತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗಧಿ ಪಡಿಸಲಾಗಿದೆ.

**1) ನಿಯೋಜನೆಯ ಅವಧಿ**

ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ:8–12–2003 ರಿಂದ 3 ವರ್ಷದವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**2) ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

**3) ವೇತನ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಇವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200ರೂ.ಗಳ ಗರಿಷ್ಠ ಮಿತಿಗೊಳಪಟ್ಟು, ಆ ವೇತನ ಶ್ರೇಣಿಯ ಸರಾಸರಿಯ ಶೇ.5ರ ದರದಲ್ಲಿ ಅನ್ಯಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

**4) ತುಟ್ಟಿ ಭತ್ಯೆ:**

ಮನೆ ಬಾಡಿಗೆ ಭತ್ಯೆ: ನಗರ ಪರಿಹಾರ ಭತ್ಯೆ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

**5) ಸೇರುವ ಕಾಲ:** ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

**6) ಪ್ರಯಾಣ ಭತ್ಯೆ:**

ನಿಯೋಜನೆ ಮೇಲೆ ಅನ್ಯಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

**7) ರಜೆ ನಿಯಮಗಳು:–**

ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜಾ ನಿಯಮಗಳಿಗೆ ಒಳಪಟ್ಟಿರುತ್ತಾರೆ.

**8) ರಜೆ ಪ್ರಯಾಣ ರಿಯಾಯಿತಿ:**

ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

**9) ಗಳಿಕೆ ರಜೆ ನಗದೀಕರಣ:–**

ಕರ್ನಾಟಕ ನಾಗರೀಕರ ಸೇವಾ ನಿಯಮಗಳ 'ಸಿ' ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

**10) ವೈದ್ಯಕೀಯ ರಿಯಾಯಿತಿಗಳು:–**

1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ)ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ನಿಯೋಜಕರೇ ಭರಿಸತಕ್ಕದ್ದು.

**11) ದುರ್ಬಲತೆ ರಜೆ:–**

ನಿಯೋಜಕರ ಬಳಿ ಸೇವೆಯಲ್ಲಿರುವಾಗ ಅಥವಾ ಸೇವೆಯ ಮೂಲಕ ಸಂಬಂಧಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡುಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯನಿಯೋಜಕರು ಬದ್ಧರಾಗಿರುತ್ತಾರೆ.

**12) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:–**

(ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | |
|---|---|
| (1) ರಜೆ ವೇತನ ಅಂಶದಾನ: | ಅನ್ಯಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ, ಪಡೆಯುವ ಸಂಬಳದ ಶೇ 11ರಷ್ಟು. |
| (2) ನಿವೃತ್ತಿ ವೇತನ ಅಂಶದಾನ: | ಕಾಲ ಕಾಲಕ್ಕೆ ಪಡೆಯುವ ವೇತನದ 8ನೇ ಒಂದು ಭಾಗ ಉದ್ದೇಶಕ್ಕೆ ವೇತನ–ಎಂದರೆ ಸರ್ಕಾರಿ ಆದೇಶ ಸಂ.ಎಫ್‌ಡಿ 37 ಎಸ್‌ಆರ್‌ಎಸ್ 87, ದಿನಾಂಕ:11–2–88ರಲ್ಲಿ ವಿವರಿಸಲಾದ ವೇತನ ಎಂದರ್ಥ. |

ಅ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯಸೇವೆಯು ಮುಗಿದು ಹೋದಂದಿನಿಂದ ರಜೆಯ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | | |
|---|---|---|
| ಆ)ರಜೆ ವೇತನ | 1)ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು 800– ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ |
| | 2)ಇತರ ಪ್ರಕರಣದಲ್ಲಿ | |

| | |
|---|---|
| ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ |
| ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೇ ಹೋದಲ್ಲಿ | ಸಂಬಂಧದ ಶೀರ್ಷಿಕೆ 800 ಇತರೆ ಜಮೆಗಳು–ರಜೆ ವೇತನದ ಅಂಶದಾನ |
| 1) ಸಾಮಾನ್ಯ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0075 ಇತರೆ ಸಾಮಾನ್ಯ ಸೇವೆಗಳು 800 ಇತರೆ ಜಮೆಗಳು–ರಜೆ ವೇತನ ಅಂಶದಾನ |
| 2) ಸಾಮಾನ್ಯ ಮತ್ತು ಸಾಮುದಾಯಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0250 ಇತರೆ ಸಾಮಾಜಿಕ ಸೇವೆಗಳು–800 ಇತರೆ ಜಮೆಗಳು ರಜೆ ವೇತನ ಅಂಶದಾನ |
| 3) ಆರ್ಥಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475 ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–800 ಇತರೆ ಜಮೆಗಳು ರಜೆ ವೇತನದ ಅಂಶದಾನ. |

ಸಿ) ನಿವೃತ್ತಿ ವೇತನ ಅಂಶದಾನ: 0071 ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಸೌಲಭ್ಯಗಳ ಅಂಶದಾನ ಮತ್ತು ವಸೂಲಿಗಳು 101.ಚಂದಾಗಳು ಮತ್ತು ಅಂಶದಾನಗಳು– 03.ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06 ನಿವೃತ್ತಿ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ.

(ಡಿ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100 ರೂ.ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

(ಈ) ರಜೆ ವೇತನ ಮತ್ತು ನಿವೃತ್ತಿ ವೇತನ ವಂತಿಕೆಗಳನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು– ಇವರಿಂದ ಮಹಾಲೇಖಪಾಲರು(ಎ ಅಂಡ್ ಇ) ಕರ್ನಾಟಕ, ಬೆಂಗಳೂರು. ಇವರಿಗೆ ತಪ್ಪದೇ ಕ್ರಾಸ್ ಮಾಡಿದ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿ ಮಾಡತಕ್ಕದ್ದು, ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದಲ್ಲ. ಅಂತಹ ನಗದು ರೂಪದಲ್ಲಿ ಸಂದಾಯ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮಹಾಲೇಖಪಾಲರ ಕಛೇರಿಯಲ್ಲಿ ಸ್ವೀಕೃತವಾದ ದಿನಾಂಕವನ್ನು ವಂತಿಕೆಯ ಹೊಣೆಯಿಂದ ವಿಮುಕ್ತಿ ಪಡೆದ ದಿನಾಂಕವೆಂದು ಪರಿಗಣಿಸತಕ್ಕದಾದ್ದರಿಂದ, ಚೆಕ್ :ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿಗದಿಪಡಿಸಿದ ದಿನಾಂಕದೊಳಗಾಗಿ ಮಹಾಲೇಖಪಾಲರ ಕಛೇರಿ (ಎ ಅಂಡ್ ಇ) ಕರ್ನಾಟಕ, ಬೆಂಗಳೂರು ಇವರಿಗೆ ತಲುಪುವಂತೆ ಕಳುಹಿಸತಕ್ಕದ್ದು.

(ಎಫ್) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳ ವಂತಿಕೆ ಮತ್ತು ಅವುಗಳ ಮೇಲೆ ಬಡ್ಡಿಯಿದ್ದರೆ, ಅಂತಹ ಬಡ್ಡಿಗಳನ್ನು ಅತ್ಯಂತ ದತ್ತಿದರ ರೂಪಾಯಿಗೆ ಸರಿಹೊಂದಿಸತಕ್ಕದ್ದು.

**(13) ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:–** ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಕೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ–ಎ ದಲ್ಲಿನ ಅನುಸೂಚಿಯೊಂದಿಗೆ ಇಲಾಖಾ ಮುಖ್ಯಸ್ಥರ ಹೆಸರಿಗೆ ಕ್ರಾಸ್ ಮಾಡಿದ ಚೆಕ್; ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಕಳುಹಿಸತಕ್ಕದ್ದು.

**14)ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ:–** ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ ಅನ್ಯಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ ನಿಯಮಾವಳಿ: ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ : ಜಿ.ಪಿ.ಎಫ್. ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

ಸಾಮಾನ್ಯ ಭವಿಷ್ಯ ನಿಧಿ : 8005.ರಾಜ್ಯ ಭವಿಷ್ಯ ನಿಧಿ

ಕರ್ನಾಟಕ ಸರ್ಕಾರಿ ವಿಮಾ ಇಲಾಖೆ : 8011 ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು–1 ಜಮೆ ನಿಧಿಗಳು.

**15)ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:–**

ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದುನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965 ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

**16)ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:–**

ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯವನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

**17)ಗೃಹ ನಿರ್ಮಾಣ ಮುಂಗಡ: ಗೃಹ ಖರೀದಿ ಮುಂಗಡ :ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:–**

ನಿಯೋಜಕರು, ಪ್ರಸ್ತುತ, ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತಾತ್ಮಕ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

18)ದಿನಾಂಕ:10–7–96 ಸಂಖ್ಯೆ–ಎಫ್ ಡಿ 1 ಟಿಎಫ್‌ಪಿ 96 ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆ ಸಹಮತಿಯನ್ನು ಪೂರ್ವಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ.ಸಿದ್ಧಾಂತಿ**

ಪಿ.ಆರ್. 1206

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಶ್ರೀ ಮಲ್ಲೇಶ್, ಸಿಪಿಸಿ 857 ಮತ್ತು ಶ್ರೀ ಚಂದ್ರಪ್ಪ ಸಿಪಿಸಿ 1066, ಬೆಂಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಂಗಳೂರು ಜಿಲ್ಲೆ ರವರ ಆದೇಶ ಸಂಖ್ಯೆ:ಪನ್ಸಿ/ಡಿಇ /27/99-2000 ಓ.ಬಿ. ಸಂಖ್ಯೆ.544/2000-01 ದಿನಾಂಕ:19-12-2000.

2) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಮೈಸೂರು ರವರ ಆದೇಶ ಸಂಖ್ಯೆ:ಸಿಬ್ಬಂದಿ(2) /43/98-99 ಓಬಿ ಸಂ.39/2001-02 ದಿನಾಂಕ:2-5-2001.
3) ಅರ್ಜಿದಾರ ಶ್ರೀ ಮಲ್ಲೇಶ್, ಸಿಪಿಸಿ 857 ರವರ ಮನವಿ
4) ಅರ್ಜಿದಾರ ಶ್ರೀ ಚಂದ್ರಪ್ಪ, ಸಿಪಿಸಿ 1066 ರವರ ಮನವಿ
5) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(1)54/2001-02 ದಿನಾಂಕ: -7-2002.

**ಪ್ರಸ್ತಾವನೆ:**

ಶ್ರೀ ಮಲ್ಲೇಶ್, ಸಿಪಿಸಿ 857 ಮತ್ತು ಶ್ರೀ ಚಂದ್ರಪ್ಪ ಸಿಪಿಸಿ 1066, ಬೆಂಗಳೂರು ಜಿಲ್ಲೆ ರವರ ವಿರುದ್ಧ(ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಡವಳಿ) ನಿಯಮಾವಳಿ, 1965ರ ನಿಯಮ 6 ಮತ್ತು 8ರಡಿ ಜಂಟೀ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:** ಶ್ರೀ ಮಲ್ಲೇಶ್, ಪೇದೆ 857 ಮತ್ತು ಶ್ರೀ ಚಂದ್ರಪ್ಪ ಪೇದೆ 1066 ರವರುಗಳು ಈ ಹಿಂದೆ ದೇವನಹಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರು ವಾಸವಾಗಿದ್ದ ಶ್ರೀ ಪ್ರಭಾಕರ್ ಎಂಬುವರ ಮನೆಯಲ್ಲಿದ್ದಾಗ ಅವರ ಪತ್ನಿಯಾದ ಶ್ರೀಮತಿ ನೇತ್ರಾವತಿ ಎಂಬುವರೊಂದಿಗೆ ಪೇದೆ 857 ಮಲ್ಲೇಶ್ ಎಂಬುವರು ಅಸಭ್ಯವಾಗಿ ವರ್ತಿಸಿ ಪೇದೆ 1066 ಚಂದ್ರಪ್ಪನವರ ಸಹಕಾರದಿಂದ ದಿನಾಂಕ:18-10-98ರಂದು ಅಕ್ರಮ ಬಂಧನದಲ್ಲಿಟ್ಟು ಈ ಬಗ್ಗೆ ದೇವನಹಳ್ಳಿ ಠಾಣೆಯ ಮೊ.ಸಂ. 150/98 ಕಲಂ 114-366 ಜೊತೆಗೆ 34 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. ಈ ರೀತಿ ಇವರುಗಳು ಇಲಾಖೆಗೆ ಕಳಂಕ ತರುವ ರೀತಿ ವರ್ತಿಸಿ, ಕರ್ತವ್ಯದಲ್ಲಿ ಅತೀವ ದುರ್ನಡತೆ ಮತ್ತು ಬೇಜವಾಬ್ದಾರಿತನ ತೋರಿರುತ್ತಾರೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರಿಬ್ಬರ ವಿರುದ್ಧ ಆರೋಪ ಸಾಬೀತಾಗಿದೆ ಎಂಬ ವರದಿಯ ಆಧಾರದ ಮೇಲೆ(1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದುಹಾಕಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲದಿದ್ದರೂ ಅಂಶಿಕವಾಗಿ ಪುರಸ್ಕರಿಸಿ, ಅವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ, ಅವರುಗಳ ವೇತನವನ್ನು ಪೊಲೀಸ್ ಸೇವೆಯ ಕನಿಷ್ಟ ಮಟ್ಟಕ್ಕೆ 5 ವರ್ಷಗಳ ಅವಧಿಗೆ ಸಂಚಿತ ಪರಿಣಾಮವಾಗಿ ಇಳಿಸಿ ಮೇಲ್ಮನವಿ ಪ್ರಾಧಿಕಾರಿ ಮೇಲೆ(2)ರಲ್ಲಿ ಓದಲಾದ ಆದೇಶವನ್ನು ಹೊರಡಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರಿಬ್ಬರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಒಬ್ಬ ವ್ಯಕ್ತಿಯು ಪರಿವೀಕ್ಷಣೆ ಅವಧಿಯಲ್ಲಿಯೇ ದುರ್ನಡತೆ ಆರೋಪವನ್ನು ಎದುರಿಸುತ್ತಿದ್ದಾಗ ಅಂತಹ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಿ ದಂಡನೆಯನ್ನು ವಿಧಿಸಬೇಕಾಗುತ್ತದೆ. ಈ ಕಾರಣದ ಹಿನ್ನೆಲೆಯಲ್ಲಿ, ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಂಗಳೂರು ಜಿಲ್ಲೆ ಇವರು ಅದೇ ಆರೋಪದ ಬಗ್ಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ದಿನಾಂಕ:26-2-2000ರಲ್ಲಿ ಆದೇಶಿಸಿದ್ದರು. ವಿಚಾರಣಾ ಪ್ರಾಧಿಕಾರಿಗಳು ತಮ್ಮ ದಿನಾಂಕ:26-9-2000ರಲ್ಲಿ ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಆರೋಪಗಳು ಸಾಬೀತಾಗಿದ್ದರಿಂದ ದಿನಾಂಕ: 19-12-2000ರ ಆದೇಶದಲ್ಲಿ ಅವರನ್ನು ಅಂದರೆ, ಶ್ರೀ ಮಲ್ಲೇಶ್ ಹಾಗೂ ಶ್ರೀ ಚಂದ್ರಪ್ಪ ರವರುಗಳನ್ನು ಸೇವೆಯಿಂದ ತೆಗೆದುಹಾಕಿದ್ದಾರೆ.

ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ದಿನಾಂಕ:2-5-2001ರ ಆದೇಶದಲ್ಲಿ ದಿನಾಂಕ:19-12-2000ರ ಆದೇಶವನ್ನು ಮಾರ್ಪಡಿಸಿ, ಅವರನ್ನು ಪುನಃ ಸೇವೆಯಲ್ಲಿ ಸ್ಥಾಪಿಸಿ, ಅವರುಗಳ ವೇತನವನ್ನು 5 ವರ್ಷಗಳ ಕಾಲ ಪೊಲೀಸ್ ಪೇದೆಯ ವೇತನದ ಕನಿಷ್ಟ ವೇತನ ಮಟ್ಟಕ್ಕೆ ಇಳಿಸಿದ್ದಾರೆ. ಸದರಿಯವರು ಕರ್ತವ್ಯದಿಂದ ಹೊರಗೆ ಉಳಿದ ಅವಧಿಯನ್ನು ಕರ್ತವ್ಯದಿಂದ ಹೊರಗೆ ಉಳಿದ ಅವಧಿ ಎಂದೇ ಪರಿಗಣಿಸಿದ್ದಾರೆ.

ಮೇಲೆ ಓದಲಾದ ಕಂಡಿಕೆಗಳನ್ನು ಪರಿಶೀಲಿಸಿದಲ್ಲಿ, ಒಂದೇ ಆರೋಪಕ್ಕೆ ಸಂಬಂಧಿಸಿದಂತೆ ಎರಡು ಆದೇಶಗಳನ್ನು ಹೊರಡಿಸಿರುವುದು ಕಂಡುಬರುತ್ತದೆ. ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ-6ರ ಪ್ರಕಾರ ಸೇವೆಯಿಂದ ತೆಗೆಯಬೇಕಾದರೆ No stigma to be attached to the order of discharge ಎಂದಿದೆ. ಸದರಿ ನಿಯಮಗಳ ನಿಯಮ-7ರ ಪ್ರಕಾರ ಸೇವೆಯಿಂದ ತೆಗೆಯಬೇಕಾದರೆ, ಅಂದರೆ, ಒಬ್ಬ ವ್ಯಕ್ತಿಯು ಪರಿವೀಕ್ಷಣೆ ಅವಧಿಯಲ್ಲಿಯೇ ದುರ್ನಡತೆ ಆರೋಪವನ್ನು ಎದುರಿಸುತ್ತಿದ್ದಾಗ, ಅಂತಹ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಿ, ದಂಡನೆಯನ್ನು ವಿಧಿಸಬೇಕಾಗುತ್ತದೆ. ಆದರೆ, ಪ್ರಸ್ತುತ ಪ್ರಕರಣದಲ್ಲಿ ಇವರುಗಳ ಮೇಲೆ ಆರೋಪ ಇದ್ದಾಗ, ಸದರಿಯವರುಗಳನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ (1)ರ ಪ್ರಕಾರ ಸೇವೆಯಿಂದ ತೆಗೆದುಹಾಕಿರುವುದು ಕಾನೂನುಬಾಹಿರ. ಅದಕ್ಕೆ ಕಾನೂನು ಸಮರ್ಥನೆ ಇಲ್ಲ. ಆದುದರಿಂದ 7-11-1998 ಮತ್ತು 24-9-1999ರ ಆದೇಶಗಳು ನಿರರ್ಥಕಗೊಂಡಿವೆ.

ಆದರೆ, ಇದೇ ಆರೋಪದ ಬಗ್ಗೆ ಎಸ್.ಪಿ. ಬೆಂಗಳೂರು ಇವರು ವಿಚಾರಣೆ ನಡೆಸಿ, ದಿನಾಂಕ: 19-12-2000ರ ಆದೇಶದಲ್ಲಿ ಸದರಿಯವರನ್ನು ಸೇವೆಯಿಂದ ತೆಗೆದುಹಾಕಿದ್ದು, ತದನಂತರ ಅಪೀಲು ಪ್ರಾಧಿಕಾರವು ದಿನಾಂಕ: 2-5-2001ರ ತಮ್ಮ ಆದೇಶದಲ್ಲಿ ಮುಖ್ಯವಾಗಿ, ಆರೋಪಿತ ನೌಕರರಿಗೆ ಈ ಉದ್ಯೋಗವೇ ಜೀವನಾಧಾರವಾಗಿದ್ದು, ಇವರ ಕುಟುಂಬ ತೊಂದರೆ ಎದುರಿಸುವ ಕಾರಣದಿಂದ ಇವರುಗಳ ಮೇಲೆ ಅನುಕಂಪ ತೋರಿಸಿ, ವಜಾಗೊಂಡಿದ್ದ ನೌಕರರುಗಳನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ, ಸದರಿಯವರುಗಳ ವೇತನವನ್ನು 5 ವರ್ಷಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಪೊಲೀಸ್ ಪೇದೆಗಳ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಇಳಿಸುವ ದಂಡನೆಯನ್ನು ವಿಧಿಸಿ, ಅವರು ಸೇವೆಯಿಂದ ಹೊರಗೆ ಉಳಿದ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ ಅವಧಿಯೆಂದು ಪರಿಗಣಿಸಲಾಗಿದೆ. ಅಂತೆಯೇ, ದಿನಾಂಕ:2-5-2001ರ ಅಪೀಲು ಪ್ರಾಧಿಕಾರದ ಆದೇಶದಲ್ಲಿ ವಿಧಿಸಿರುವ ದಂಡನೆಯು ಆರೋಪಕ್ಕೆ ಅನುಗುಣವಾಗಿದ್ದು, ಸದರಿ ದಂಡನೆಯನ್ನು ಸರ್ಕಾರ ಮತ್ತಷ್ಟು ಕಡಿಮೆಗೊಳಿಸಲು ಯಾವುದೇ ಸಮರ್ಥನೆ ಇರುವುದಿಲ್ಲ. ಆದುದರಿಂದ, ಶ್ರೀಯುತರುಗಳ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಬಹುದು.

ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 218 ಪೊಸಿಅ 2001, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಲ್ಲೇಶ್, ಸಿಪಿಸಿ 857 ಮತ್ತು ಶ್ರೀ ಚಂದ್ರಪ್ಪ, ಸಿಪಿಸಿ 1066, ಕುದೂರು ಪೊಲೀಸ್ ಠಾಣೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1069

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).